| ಕ್ರಮ ಸಂಖ್ಯೆ | ಯೋಜನೆಯ ಹೆಸರು | | ಯೋಜನೆಯ ಅಂದಾಜು ವೆಚ್ಚ (ಲಕ್ಷ ರೂ.ಗಳಲ್ಲಿ) | ಹಾದುಹೋಗುವ ಪ್ರದೇಶ |
|---|---|---|---|---|
| | ಉದ್ದೇಶಿಸಿರುವ 66/11 ಕೆ.ವಿ. ಉಪ ಸ್ಥಾವರಕ್ಕೆ ಹಾಲಿ ಇರುವ ಅಂಚೇಪಾಳ್ಯ–ಅಮೃತ್ತೂರು 66 ಕೆ.ವಿ. ಪ್ರಸರಣಾ ಮಾರ್ಗದಿಂದ 15.22 ಕಿ.ಮೀ. ಉದ್ದದ 66 ಕೆ.ವಿ. ಒಂಟಿ ಪ್ರಸರಣ ಮಾರ್ಗವನ್ನು ನಿರ್ಮಿಸುವುದು. | 3) ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>4) ಅಮೃತ್ತೂರು ಮತ್ತು ಹುಲಿಯೂರು ದುರ್ಗ ಉಪ ಸ್ಥಾವರದ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದು.<br>5) ಮುಂಬರುವ ವಿದ್ಯುತ್ ಬೇಡಿಕೆಯನ್ನು ಕಲ್ಪಿಸುವುದು. | | ಹಳಗೆರೆ, ಕುಪ್ಪೆ, ಕೋಡಿಹಳ್ಳಿ, ಕಿಲಾರ, ಯಡವಾಣಿ |

ಕ.ವಿ.ಪ್ರ.ನಿ.ನಿ. ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885 ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III) ರ (ಕೇಂದ್ರ ಕಾಯ್ದೆ 1886ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಕೋತಿತೋಪು, ತುಮಕೂರು–02 ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಬೃಹತ್ ಕಾಮಗಾರಿ ವಿಭಾಗ,
ತುಮಕೂರು.

**ಪಿ.ಡಿ. 26**

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
## ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಹಾಸನ
## ಪ್ರಕಟಣೆ

**ಸಂಖ್ಯೆ : ಕಾನಿಇಂ/ಸಕಾನಿಇಂ/ಬೃಕಾವಿ/ಹಾಸನ/ಟಿ–104/4413–14, ದಿನಾಂಕ 15ನೇ ಫೆಬ್ರವರಿ 2012**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೆ॥ ಸಾಯಿ ನಿರೀಹ ಪವರ್ ಪ್ರಾಜೆಕ್ಟ್ ಪ್ರೈ. ಲಿ., ಹೈದರಾಬಾದ್ ರವರಿಗೆ ಕಟ್ಟೆಪುರ ಅಣೆಕಟ್ಟು, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆಯಲ್ಲಿ 5 ಮೆ.ವ್ಯಾ. ಕಿರು ಜಲ ವಿದ್ಯುತ್ ಯೋಜನೆಯಿಂದ ವಿದ್ಯುಚ್ಛಕ್ತಿ ತೆರವುಗೊಳಿಸುವುದಕ್ಕಾಗಿ ಯೋಜನೆಯನ್ನು ಅನುಮೋದನೆ ನೀಡಿರುತ್ತದೆ ಮತ್ತು ವಿದ್ಯುತ್ ಪೂರೈಕೆ ಕಾಯ್ದೆ 2003, ಸೆಕ್ಷನ್ 67(2) (ಸಿ) ರ ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಯೋಜನೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ :–

**ಕೆಲಸದ ಹೆಸರು :** ಮೆ॥ ಸಾಯಿ ನಿರೀಹ ಪವರ್ ಪ್ರಾಜೆಕ್ಟ್ ಪ್ರೈ. ಲಿ., ರವರು ಕಟ್ಟೆಪುರ ದಲ್ಲಿ ಹೊಸದಾಗಿ ನಿರ್ಮಿಸುತ್ತಿರುವ 5 ಮೆ.ವ್ಯಾ. ಕಿರು ಜಲ ವಿದ್ಯುತ್ ಯೋಜನೆಗೆ ಹಾಲಿ ಇರುವ 66/11 ಕೆ.ವಿ. ರಾಮನಾಥಪುರ ಉಪಕೇಂದ್ರಕ್ಕೆ ವಿದ್ಯುತ್ ಮಾರ್ಗವನ್ನು ನಿರ್ಮಿಸುವ ಕಾಮಗಾರಿ 5.530 ಕಿ.ಮೀ. ಉದ್ದದ 66 ಕೆ.ವಿ. ವಿದ್ಯುತ್ ಮಾರ್ಗ.

**ಉದ್ದೇಶ :** ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನೆಯಿಂದ ಉತ್ಪಾದಿಸುವ 5 ಮೆ.ವ್ಯಾ. ವಿದ್ಯುತ್ ಅನ್ನು ರಾಮನಾಥಪುರ ಹೋಬಳಿ ಸುತ್ತಮುತ್ತಲ ಪ್ರದೇಶಗಳಿಗೆ ವಿತರಿಸುವ ಸಲುವಾಗಿ

**ಹಾದು ಹೋಗುವ ಪ್ರದೇಶ/ಸರ್ವೆ ನಂ. ಗಳು:**

**ಸರಗೂರು:**

20,19/3

**ಕಟ್ಟೆಪುರ:**

44/4, 44/6, 44/7, 44/8, 46/6, 46/7, 46/8, 46/9, 46/10, 3, 4/2, 5/1, 5/2, 26/2

26/3, 25/1,24/7, 24/9, 24/10, 23, 21, 19/3, 18/1, 15/4, 15/6, 14/8, 14/9, 14/10, 12

**ಬಂಗಾರಹಳ್ಳಿ:**

14/1, 15/1A2 15/B, 15/2, 16, 17, 18/, 20/1

**ರಘುಪತಿ ಕೊಪ್ಪಲು:**

1/2, 1/4B, 1/5,4

**ಉತ್ತರ ನಾಲಾ ಹಂತ:**

21/3, 22, 24, 27/1, 28/1, 28/2, 28/4, 29/3, 30/4, 41/1, 2, 3, 4, 5, 6 A, 6 B, 7, 8, 42/1

43/1, 43/2, 47, 46/1, 2A, 2B, 3A, 3B, 4A, 4B, 57/1, 58/2, 56/3, 56/4, 55/1, 59, 61/1, 65/1A, 65/1B, 65/2A1, 65/2A3, 65/3, 65/4, 65/5, 65/12, 66/1, 66/2, 68/1, 68/2

**ರಾಮನಾಥಪುರ ನಾಲಾ ಹಂತ:**

102/2, 105, 104/1

**ಅಂದಾಜು ವೆಚ್ಚ** : ರೂ. 176.80 ಲಕ್ಷಗಳು.

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಅಧಿನಿಯಮ 1885(13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರು ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ.
ಹಾಸನ,

**ಪಿ.ಡಿ. 27**

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

### 94ನೇ ನಿಯಮ 68(1) ನೇ ಪ್ರಕರಣದ ಮೇರೆಗೆ ಘೋಷಣೆ

### ಸಂಖ್ಯೆ : ಎಲ್‌ಎನ್‌ಡಿ ಸಿ.ಆರ್. 180/11–12, ದಿನಾಂಕ 2ನೇ ಫೆಬ್ರವರಿ 2012

**ವಿಷಯ :** ಮುಳಬಾಗಿಲು ತಾಲ್ಲೂಕು ಕಸಬಾ ಹೋಬಳಿ ಮುಳಬಾಗಿಲು ಗ್ರಾಮದ ಸ.ನಂ. 104/21 ರಲ್ಲಿ 0–20 ಗುಂಟೆ ಜಮೀನನ್ನು ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯಕ್ಕೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ :** ಸಹಾಯಕ ಕಮೀಷನರ್ ಕೋಲಾರ ರವರ ಪತ್ರ ಸಂಖ್ಯೆ ಎಲ್‌ಎನ್‌ಡಿ. ಸಿಆರ್.3/11–12, ದಿನಾಂಕ 06–01–2012.

ಸರ್ಕಾರದ ಸ್ವತ್ತಾಗಿರುವ ಹಾಗೂ ಈ ಕೆಳಗೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಖರಾಬು ಜಮೀನು ಸಾರ್ವಜನಿಕ ಉಪಯೋಗಕ್ಕೆ ಸದರಿ ಉದ್ದೇಶಕ್ಕಾಗಿ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪಪ್ರಕರಣದಂತೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಪ್ರತ್ಯಾಯೋಜನೆಯಗೊಂಡಿರುವುದರಿಂದ, ಸದರಿ ಅಧಿಕಾರವನ್ನು ಚಲಾಯಿಸಿ ಸದರಿ ಸರ್ಕಾರಿ ಖರಾಬು ಪ್ರದೇಶವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸದರಿ ಖರಾಬು ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳಿಸಲು ಉದ್ದೇಶಿಸಿರುವುದಾಗಿ ಈ ಮೂಲಕ ಘೋಷಿಸುತ್ತೇನೆ.

ಸದರಿ ಖರಾಬು ಪ್ರದೇಶದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತ್ತೊಂಬತ್ತು ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು. ಮತ್ತು ಆಕ್ಷೇಪಣೆಗಳನ್ನು ಮತ್ತು ಕ್ಲೈಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಪರಿಶೀಲಿಸಲಾಗುವುದು.

**ಅನುಸೂಚಿ**

| | | |
|---|---|---|
| ಜಿಲ್ಲೆ | : | ಕೋಲಾರ |
| ತಾಲ್ಲೂಕು | : | ಮುಳಬಾಗಿಲು |
| ಹೋಬಳಿ | : | ಕಸಬಾ |
| ಗ್ರಾಮ | : | ಮುಳಬಾಗಿಲು |

ಸ.ನಂ. 104/21 ಖರಾಬು ಜಮೀನು ವಿಸ್ತೀರ್ಣ 0–20 ಗುಂಟೆಗೆ ಸಾರ್ವಜನಿಕರ ಹಕ್ಕು ನಿವೃತ್ತಿಗಾಗಿ ಪ್ರಸ್ತಾಪಿಸಲಾಗಿದೆ.

**ಚಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಸರ್ಕಾರಿ ಜಮೀನು |
| ಪಶ್ಚಿಮಕ್ಕೆ | : | ಬಾಲಕರ ಹಾಸ್ಟಲ್‌ಗೆ ಪ್ರಸ್ತಾವನೆ ಜಮೀನು |
| ಉತ್ತರಕ್ಕೆ | : | ಸರ್ಕಾರಿ ಜಮೀನು |
| ದಕ್ಷಿಣಕ್ಕೆ | : | ದಾರಿ |

ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ

**ಪಿ.ಆರ್. 191**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ

### ಅಧಿಸೂಚನೆ

**ಸಂಖ್ಯೆ : ಬಿ3/ಅಮೊ/ವಾಹನ/ವಿವ/33/11–12, ದಿನಾಂಕ 17ನೇ ಜನವರಿ 2012**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಟಾಟಾ–407 ಕೆಎ–02–ಬಿ–113 | ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ : 61/10–11, ದಿನಾಂಕ 19–11–2011 | 497SP21BQQ716770 | 357010B805203 |
| 2 | ಕ್ಯಾಂಟರ್ ಕೆಎ–20–ಎಂ–4383 | ಶಿರಾಳಕೊಪ್ಪ ವಲಯದ ಅ.ಮೊ. ಸಂಖ್ಯೆ : 31/11–12, ದಿನಾಂಕ 01–12–2011 | E483CD4G10551 | 17EC4107668 |
| 3 | ಮಾರುತಿ ವ್ಯಾನ್ ಜಿಎ–01–ಪಿ–0235 | ಸಾಗರ ವಲಯ ಅ.ಮೊ. ಸಂಖ್ಯೆ : 68/11–12, ದಿನಾಂಕ 12–12–2011 | Not visible | Not visible |
| 4 | ಬಜಾಜ್ ಬೈಕ್ ಕೆಎ–47–ಜೆ–5495 | ಅನವಟ್ಟಿ ವಲಯ ಅ.ಮೊ. ಸಂಖ್ಯೆ : 74/11–12, ದಿನಾಂಕ 06–10–2011 | Not visible | Not visible |
| 5 | ಮಾರುತಿ ವ್ಯಾನ್ ಜಿಎ–01– ಎಂ –5538 | ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ : 63/11–12, ದಿನಾಂಕ 27–11–2011 | C-95 | ST-91-N-817925 |
| 6 | ಮಾರುತಿ ವ್ಯಾನ್ ಜಿಎ–09–ಎಂ–0212 | ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ : 64/11–12, ದಿನಾಂಕ 27–11–2011 | 041096 | ST-91-IN-174051 |

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 7 | ಟಾಟಾಏಸ್ ಕೆಎ–15–6190 | ಅನವಟ್ಟಿ ವಲಯ<br>ಅ.ಮೊ. ಸಂಖ್ಯೆ : 90/11–12,<br>ದಿನಾಂಕ 3–12–2011 | Not visible | Not visible |
| 8 | ಕ್ಯಾಂಟರ್ ಕೆಎ–16–9921 | ಆನಂದಪುರಂ ವಲಯ, ಚೋರಡಿ<br>ಅ.ಮೊ. ಸಂಖ್ಯೆ : 93/11–12,<br>ದಿನಾಂಕ 29–12–2011 | 483820980045 | 17EC985289 |
| 9 | ಪಿಗೊ ಅಪೇ ಕೆಎ–27–2760 | ಅನವಟ್ಟಿ ವಲಯ<br>ಅ.ಮೊ. ಸಂಖ್ಯೆ : 92/11–12,<br>ದಿನಾಂಕ 25–12–2011 | Not visible | Not visible |
| 10 | ಟಾಟಾಏಸ್ ಕೆಎ–15–5871 | ಅಂಬ್ಲಿಗೊಳ ವಲಯದ<br>ಅ.ಮೊ. ಸಂಖ್ಯೆ : 74/11–12,<br>ದಿನಾಂಕ 12–01–2012 | 275IDI-05-GQ-2516933 | 44505192-G-18046 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ರಾಜ್ಯ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮನೋಜ್ ಕುಮಾರ್ ತ್ರಿಪಾಠಿ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಪಿ.ಆರ್. 91**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಗ್ರಾಅಪ್ರ 29 ಎಸ್‌ಜೆವೈ 2011 (ಎ1), ಬೆಂಗಳೂರು, ದಿನಾಂಕ 25ನೇ ಜನವರಿ 2012

ಭಾರತ ಸರ್ಕಾರವು ರಾಷ್ಟ್ರದಾದ್ಯಂತ ಸಾಮಾಜಿಕ ಆರ್ಥಿಕ ಹಾಗೂ ಜಾತಿ ಗಣತಿಯನ್ನು 2011ನೇ ಸಾಲಿನಲ್ಲಿ ನಡೆಸಲು ನಿರ್ಧರಿಸಿದೆ. ಇದರಂತೆ ರಾಷ್ಟ್ರದ ಆಯಾಯ ರಾಜ್ಯಗಳು ಕೇಂದ್ರದ ಆರ್ಥಿಕ ಹಾಗೂ ತಾಂತ್ರಿಕ ಸಹಾಯದೊಂದಿಗೆ ಕೇಂದ್ರ ವಸತಿ ಹಾಗೂ ನಗರ ಬಡತನ ನಿರ್ಮೂಲನ ಮಂತ್ರಾಲಯ, ನವದೆಹಲಿ ಇವರ ಅಧಿಸೂಚನೆ ಎಫ್ ಸಂಖ್ಯೆ ಕೆ–14914.61.2010. ಯುಪಿಎ (ವಾಲ್ಯೂಂ–II) ದಿನಾಂಕ 15–06–2011 ರಂದು ಸಾಮಾಜಿಕ ಆರ್ಥಿಕ ಹಾಗೂ ಜಾತಿ ಗಣತಿ–2011 ನ್ನು ನಡೆಸಲು ಘೋಷಿಸಿದೆ. ಇದರನ್ವಯ, ಕರ್ನಾಟಕ ರಾಜ್ಯದಲ್ಲಿ ದಿನಾಂಕ 01–11–2011 ರಿಂದ ದಿನಾಂಕ 31–12–2011 ರವರೆಗೆ ಸಾಮಾಜಿಕ ಆರ್ಥಿಕ ಹಾಗೂ ಜಾತಿ ಗಣತಿ–2011 (ಎಸ್‌ಇಸಿಸಿ–2011) ನ್ನು ಎರಡು ಹಂತಗಳಲ್ಲಿ ನಡೆಸಲು ಅಧಿಸೂಚನೆ ಸಮಸಂಖ್ಯೆ ದಿನಾಂಕ 22–09–2011 ರಂದು ಘೋಷಿಸಿತ್ತು. ಇದನ್ನು 31–03–2012 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಮಿತಾ ಪ್ರಸಾದ್,**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## RURAL DEVELOPMENT AND PANCHAYAT RAJ SECRETARIAT

### NOTIFICATION

### No. RDP/29/SJY 2011 (A1), Bangalore, dated 25-01-2012

The Central Government has decided to conduct the Socio-Economic and Caste Census in the year 2011. The Socio-Economic and Caste Census would be carried out by the respective State Governments with the Financial and Technical support of

the Government of India as per Notification F.No. K-14914.61.2010 UPA (Volume-II) dated 15-06-2011 of the Ministry of Housing Urban Poverty Alleviation, New Delhi. In pursuance of this Notification, the Government of Karnataka had declared that the Socio-Economic and Caste Census 2011 (SECC-2011) shall be conducted in the State of Karnataka from 01-11-2011 to 31-12-2011 in two phases vide Notification of even No. dated 22-09-2011. Now, Government of Karnataka has decided to extend upto 31-03-2012.

By Order and in the name of the Governor of Karnataka,

**AMITA PRASAD,**

Principal Secretary to Government,

**P.R. 221** Rural Development and Panchayat Raj Department.

## ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52

**ವಿಷಯ:** ಸಮಾಪನೆಗೊಂಡಿರುವ ಶ್ರೀ ವೈಷ್ಣವಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇದರ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ಪತ್ರದ ಸಂಖ್ಯೆ : ಜೆ.ಆರ್.ಬಿ./ಸಮಾಪನೆ 374/151/2011–12, ದಿನಾಂಕ 02–01–2010. ಹಾಗೂ ಜೆ.ಆರ್.ಬಿ./ಸಮಾಪನೆ/374/2010–11, ದಿನಾಂಕ 31–3–2011.
2. ಈ ಕಛೇರಿ ಪತ್ರದ ಸಂಖ್ಯೆ : ಸ.ಸಂ.ನಿ./ಸಮಾಪನೆ/44/2011–12, ದಿನಾಂಕ 25–01–2012.
3. ಶ್ರೀ ವೈಷ್ಣವಿ ಗೃಹ ನಿರ್ಮಾಣ ಸಹಕಾರ ಸಂಘದ ಮಾಜಿ ಅಧ್ಯಕ್ಷರ ವಿವರಗಳ ದಿನಾಂಕ 04–02–2012.

**ಪ್ರಸ್ತಾವನೆ :**

ಶ್ರೀ ವೈಷ್ಣವಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಘವು ಉಪನಿಯಮದ ರೀತ್ಯಾ ತನ್ನ ಕಾರ್ಯಾಚರಣೆ ನಡೆಸದೇ ಇರುವುದರಿಂದ ಹಾಗೂ ಲೆಕ್ಕ ಪತ್ರಗಳನ್ನು ಕಾಲಕಾಲಕ್ಕೆ ತಪಾಸಣೆ ಮಾಡಿಸದೇ ಇರುವುದರಿಂದ ಸಂಘದ ಮಹಾಸಭೆ ಕಾರ್ಯಕಾರಿ ಸಮಿತಿ ಸಭೆಗಳನ್ನು ಜರುಗಿಸದೇ ಇರುವುದರಿಂದ ಹಾಗೂ ಈ ಸಂಘವು ನೋಂದಣಿಯಾದಾಗಿನಿಂದ ಸ್ಥಗಿತಗೊಂಡಿದ್ದು ಈ ಸಂಘದಿಂದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಉಲ್ಲೇಖ (1) ರ 31–3–2011 ಪತ್ರದ ಅನುಬಂಧದ ಕ್ರಮ ಸಂಖ್ಯೆ 2 ರಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಿ ದಿನಾಂಕ 31–03–2011 ರಂದು ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುವುದಾಗಿ ವರದಿಸಲಾಗಿದೆ.

ಹಾಗೂ ಸದರಿ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಕೋರಿ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರಿಗೆ ಮನವಿ ಸಲ್ಲಿಸಿರುವುದಾಗಿ ಮನವಿಯ ಮೇರೆಗೆ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರೂ ಸದರಿ ಸಂಘವನ್ನು ಪುನಃಶ್ಚೇತನ ಮಾಡುವುದರಿಂದ ಉಪನಿಯಮದ ರೀತ್ಯಾ ನಡೆಸಿಕೊಂಡು ಹೋಗುವುದಾಗಿ ಸಂಘವನ್ನು ಮತ್ತೊಮ್ಮೆ ಸ್ಥಗಿತಗೊಳಿಸಲು ಯಾವುದೇ ಕಾರಣಕ್ಕೂ ಅವಕಾಶ ನೀಡುವುದಿಲ್ಲವೆಂದು ಸದಸ್ಯರು ತಿಳಿಸಿರುವುದಾಗಿ ಸದರಿ ಸಂಘದಲ್ಲಿ 480 ಜನ ಸದಸ್ಯರಿರುವುದಾಗಿ ಸುಮಾರು 50 ಎಕರೆ ಜಮೀನನ್ನು ಖರೀದಿಸಲು ಯೋಜನೆ ಹೊಂದಿ ಸುಮಾರು 1000 ನಿವೇಶನಗಳನ್ನು ರಚಿಸುವುದಾಗಿ ಸಂಘದ ಸದಸ್ಯರು ತಿಳಿಸಿರುವುದಾಗಿ ಉಪ ನಿಬಂಧಕರ ಪತ್ರದಲ್ಲಿ ವಿವರಿಸಿ ಶಿಫಾರಸ್ಸು ಮಾಡಿರುವುದಾಗಿ ಜಂಟಿ ನಿಬಂಧಕರು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿ ಪ್ರಕರಣ 73 (3) ರನ್ವಯ ಪುನಃಶ್ಚೇತನಗೊಳಿಸುವ ಅಧಿಕಾರ ಅಪರ ನಿಬಂಧಕರು (ಗೃಹ ಮತ್ತು ಇತರೆ) ಇವರಿಗೆ ಇರುವುದನ್ನು ತಿಳಿಸಿ ಪ್ರಸ್ತಾವೆ ಕಳುಹಿಸಿರುತ್ತಾರೆ.

ದಿನಾಂಕ 14–10–2011ರ ಸಮಾಪನಾಧಿಕಾರಿಗಳ ಸಭೆಯಲ್ಲಿಯೂ ಸಹ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಸದಸ್ಯರ ಕೋರಿಕೆಯಂತೆ ನಿರ್ಣಯಿಸಿದ್ದು ದಿನಾಂಕ 17–10–2011 ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ತಿಳಿಸಿರುತ್ತಾರೆ.

ಸಹಕಾರ ಸಂಘಗಳ ಜಂಟಿ ನಿಬಂಧಕರ ಉಲ್ಲೇಖ (1)ರ ಪ್ರಸ್ತಾವೆ ಕುರಿತಂತೆ ಉಲ್ಲೇಖ (2) ರಲ್ಲಿ ಸಂಘದ ಮಾಜಿ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳಿಗೆ ಪತ್ರ ಬರೆದು 1 ರಿಂದ 9 ಅಂಶಗಳ ಬಗ್ಗೆ ವಿವರಗಳೊಂದಿಗೆ ದಿನಾಂಕ 31–01–2011 ರಂದು ಈ ಕಾರ್ಯಾಲಯದಲ್ಲಿ ಹಾಜರಾಗಲು ಸೂಚಿಸಲಾದ ಪ್ರಕಾರ ಸಂಘದ ಮಾಜಿ ಅಧ್ಯಕ್ಷರು ಹಾಜರಿದ್ದು ದಾಖಲಾತಿಗಳನ್ನು ಸಲ್ಲಿಸಲು ಕಾಲಾವಕಾಶ ಕೋರಿ ದಿನಾಂಕ 06.02.2012 ರಂದು ವಿವರಗಳನ್ನು ಸಲ್ಲಿಸಿರುತ್ತಾರೆ ಅವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

| ಕೇಳಲಾದ ವರದಿ | ಸಲ್ಲಿಸಿರುವ ಮಾಹಿತಿ |
|---|---|
| 1. ಸಂಘವು ನೋಂದಣಿಯಾದಾಗ ಇದ್ದ ಆಡಳಿತ ಮಂಡಳಿಯ ವಿವರ, ಹೆಸರು ಮತ್ತು ವಿಳಾಸ | 1. ನೋಂದಣಿಯಾದಾಗ ಇದ್ದ ಆಡಳಿತ ಮಂಡಳಿಯ ವಿವರಗಳನ್ನು ಲಗತ್ತಿಸಿದೆ. |

| ಕೇಳಲಾದ ವರದಿ | ಸಲ್ಲಿಸಿರುವ ಮಾಹಿತಿ |
|---|---|
| 2. ಸಂಘವು ನೋಂದಣಿಯಾದ ನಂತರ ರಚಿಸಲಾದ ಬಡಾವಣೆಗಳ ಬಗ್ಗೆ ವಿವರಿಸುವುದು, ಬಡಾವಣೆ ರಚಿಸದಿದ್ದಲ್ಲಿ ಕಾರಣಗಳು | 2. ಸಂಘವು ನೋಂದಣಿಯಾದ ನಂತರ ರಚಿಸಲಾದ ಬಡಾವಣೆಗಳ ಬಗ್ಗೆ ವಿವರಿಸುವುದು ಯಾವ ಬಡಾವಣೆಯನ್ನು ರಚಿಸಲಾಗಿಲ್ಲ ಆಡಳಿತ ಮಂಡಳಿಯು ಸದಸ್ಯರುಗಳಿಗೆ ಕೈಗೆಟಕುವ ದರದಲ್ಲಿ ಹಂಚಿಕೆ ಮಾಡಲು ಸಾಧ್ಯವಾಗಿರುವುದಿಲ್ಲ. |
| 3. ಸಂಘವು ಸ್ಥಗಿತಗೊಳ್ಳಲು ಕಾರಣರ್ಯಾರು, ವಿವರಿಸುವುದು. | 3. ಸಂಘವು ಸ್ಥಗಿತಗೊಳ್ಳಲು ನಿಖರವಾಗಿ ಯಾರು ಕಾರಣರಲ್ಲ ಸಂಘವು ಸದಸ್ಯರಿಗೆ ಅನುಕೂಲ ಮಾಡಿಕೊಡಲು ಸತತವಾಗಿ ಪ್ರಯತ್ನಿಸಿದೆ. |
| 4. ಸಂಘದ ಸದಸ್ಯತ್ವ ನೋಂದಣಿ ಸಂದರ್ಭದಲ್ಲಿರುವುದು | 4. ಸಂಘವು ಸದಸ್ಯತ್ವ ನೋಂದಣಿ ಸಂದರ್ಭದಲ್ಲಿ 398 ಸದಸ್ಯತ್ವವನ್ನು ಹೊಂದಿತ್ತು. |
| 5. ಸಂಘವು ಸಮಾಪನೆಗೊಂಡ ಸಂದರ್ಭದಲ್ಲಿದ್ದ ಸದಸ್ಯರ ವಿವರ | 5. ಸಂಘವು ಸಮಾಪನೆಗೊಂಡ ಸಂದರ್ಭದಲ್ಲಿದ್ದ ಸದಸ್ಯರುಗಳ ವಿವರಗಳನ್ನು ಲಗತ್ತಿಸಿದೆ. |
| 6. ಸಂಘವು 50 ಎಕರೆ ಜಮೀನನ್ನು ಎಲ್ಲಿ ಖರೀದಿಸಲು ಯೋಜಿಸಿದೆ ತಿಳಿಸುವುದು. ಜಮೀನಿನ ವಿವರ/ ದಾಖಲೆಗಳನ್ನು ಒದಗಿಸುವುದು. | 6. ಸಂಘವು 50 ಎಕರೆ ಜಮೀನನ್ನು ದೇವನಹಳ್ಳಿ ತಾಲ್ಲೂಕು ಕುಂದಾಣ ಹೋಬಳಿ ಕಾಮೇನಹಳ್ಳಿ ಮತ್ತು ಬೆಟ್ಟನಹಳ್ಳಿ ಗ್ರಾಮಗಳಿಗೆ ಸೇರಿದ ಸರ್ವೆ ನಂಬರುಗಳ ವಿವರ ಹಾಗೂ ವಿಸ್ತೀರ್ಣದ ವಿವರ ಸಲ್ಲಿಸಿ ಈ ಜಮೀನಿನಲ್ಲಿ ಬಡಾವಣೆ ರಚಿಸಲು ಜಮೀನುಗಳ ಮಾಲೀಕರುಗಳ ಜೊತೆಗೆ ಮಾತುಕತೆ ನಡೆಸಿ ತಾತ್ವಿಕವಾಗಿ ಒಪ್ಪಂದಕ್ಕೆ ಬರಲಾಗಿದೆ. |
| 7. ಸಂಘವನ್ನು ಪುನಃಶ್ಚೇತನಗೊಳಿಸಿದಲ್ಲಿ ಎಷ್ಟು ಜನರಿಗೆ ಎಷ್ಟು ನಿವೇಶನಗಳನ್ನು ಎಷ್ಟು ಅವಧಿಯಲ್ಲಿ ರಚಿಸಲಾಗುವುದು. ಎಷ್ಟು ಹಂಚಿಕೆ ಮಾಡಲಾಗುವುದು ತಿಳಿಸುವುದು. | 7. ಸಂಘವು 500 ನಿವೇಶನಗಳನ್ನು ರಚಿಸಿ ಸಂಘದ ಸದಸ್ಯರುಗಳಿಗೆ 12 ತಿಂಗಳೊಳಗಾಗಿ ಹಂಚಿಕೆ ಮಾಡಲಾಗುವುದೆಂದು ಈಗ ಖರೀದಿಸಿರುವ ಜಮೀನು ವಾಸದ ಉದ್ದೇಶಕ್ಕೆ ಭೂ ಪರಿವರ್ತನೆಯಾಗಿದ್ದು ಆದಷ್ಟೂ ಬೇಗ ಬಡಾವಣೆ ಸದಸ್ಯರಿಗೆ ನಿವೇಶನ ರಚಿಸಿ ಹಂಚಿಕೆ ಮಾಡಲು ಸಾಧ್ಯವಾಗುವುದು. |
| 8. ಪುನಃಶ್ಚೇತನದ ನಂತರ ಒಂದು ಬಡಾವಣೆ ರಚಿಸಿದ ನಂತರ ಎಷ್ಟು ಬಡಾವಣೆಗಳನ್ನು ರಚಿಸುವ ಉದ್ದೇಶ ಹೊಂದಲಾಗಿದೆ, ತಿಳಿಸುವುದು. | 8. ಪುನಃಶ್ಚೇತನದ ನಂತರ ಒಂದು ಬಡಾವಣೆಯನ್ನು ರಚಿಸಿದ ನಂತರ ಸದಸ್ಯರುಗಳ ಬೇಡಿಕೆಗೆ ಅನುಗುಣವಾಗಿ ಮುಂದಿನ ಬಡಾವಣೆಗಳನ್ನು ರಚಿಸಿ ಹಂಚಲು ಯೋಜನೆ ಮಾಡಲಾಗುವುದು. |
| 9. ಬಡಾವಣೆ ರಚನೆಯಾಗಿರುವ ಅಭಿವೃದ್ಧಿದಾರರಿಂದ ನಿವೇಶನಗಳನ್ನು ಖರೀದಿಸಿ ವಿತರಿಸುವ ಉದ್ದೇಶ ಹೊಂದಿದ್ದಲ್ಲಿ, ಈ ಬಗ್ಗೆ ತಿಳಿಸುವುದು. | 9. ಸದ್ಯಕ್ಕೆ ಸಂಘವು ಬಡಾವಣೆ ರಚನೆಯಾಗಿರುವ ನಿವೇಶನಗಳನ್ನು ಅಭಿವೃದ್ಧಿದಾರರಿಂದ ಖರೀದಿಸಿ ವಿತರಿಸುವ ಉದ್ದೇಶ ಹೊಂದಿಲ್ಲ. |

ಸದರಿಯವರ ವರದಿ ಹಾಗೂ ಸಹಕಾರ ಸಂಘಗಳ ಜಂಟಿ ನಿಬಂಧಕರು ಸಲ್ಲಿಸಿರುವ ವಿವರಗಳು ಮತ್ತು ದಿನಾಂಕ 14-10-2011 ರ ಸಮಾಪನಾಧಿಕಾರಿಗಳ ಸಭೆಯ ನಿರ್ಣಯ ಇವುಗಳನ್ನು ಪರಿಗಣಿಸಿ ಸದರಿ ಸಂಘವನ್ನು ಪುನಃಶ್ಚೇತನಗೊಳಿಸುವುದರಿಂದ ಸದಸ್ಯರಿಗೆ ಅನುಕೂಲವಾಗುವುದೆಂದು ಪರಿಗಣಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶ ಹೊರಡಿಸುವುದು ಸೂಕ್ತವೆಂದು ಅಭಿಪ್ರಾಯಕ್ಕೆ ಬರಲಾಗಿದೆ.

ಪುನಃಶ್ಚೇತನಗೊಳಿಸಲಾದ ಸದರಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ಚುನಾವಣಾಧಿಕಾರಿಗಳನ್ನು ನೇಮಿಸಲು ಸಮಾಪನಾಧಿಕಾರಿಗಳು ಕ್ರಮವಿಡುವುದು. ಹಾಗೂ ಹೊಸದಾಗಿ ರಚನೆಯಾದ ಆಡಳಿತ ಮಂಡಳಿಯು ಮಹಾಸಭೆಯನ್ನು ನಿಯಮಾನುಸಾರ ನಡೆಸುವುದು.

ಪುನಃಶ್ಚೇತನ ಆದೇಶದ ನಂತರವೂ ಸಹ ಸಂಘದಲ್ಲಿ ಯಾವುದೇ ಕಾರ್ಯಚಟುವಟಿಕೆಗಳು ಬೈಲಾದ ರೀತ್ಯಾ ಜರುಗದೇ ಮತ್ತೊಮ್ಮೆ ಸ್ಥಗಿತಗೊಂಡಲ್ಲಿ ನಿಯಮಾನುಸಾರ ಕ್ರಮವಿಡಲಾಗುವುದು ಎಂಬ ಷರತ್ತಿಗೊಳಪಟ್ಟು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ : ಸ.ಸಂ.ನಿ./ಸಮಾಪನೆ/44/2011-12, ದಿನಾಂಕ 10ನೇ ಫೆಬ್ರವರಿ 2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72 (3) ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ/139/ಸಿ.ಎಲ್.ಎಂ./ 2010, ದಿನಾಂಕ 17-02-2011 ಹಾಗೂ 04-07-2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಹೆಚ್. ಮಂಜಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಅಪರ ನಿಬಂಧಕರು, (ಗೃಹ ಮತ್ತು ಇತರೆ) ಆದ ನಾನು ಸಮಾಪನೆಯಲ್ಲಿರುವ ಶ್ರೀ ವೈಷ್ಣವಿ ಗೃಹ ನಿರ್ಮಾಣ ಸಹಕಾರ ಸಂಘ ನಿ.,

ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಘದ ಸಮಾಪನಾ ಆದೇಶ ಹೊರಡಿಸಿದ್ದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಬೆಂಗಳೂರು ರವರ ಆದೇಶದ ಸಂಖ್ಯೆ : ಜೆಆರ್‌ಬಿ/ಸಮಾಪನೆ/374/2010–11, ದಿನಾಂಕ 31–03–2011ರ ಅನುಬಂಧ ಕ್ರಮ ಸಂಖ್ಯೆ 2 ಸದರಿ ಸಂಘದ ಆದೇಶವನ್ನು ರದ್ದುಗೊಳಿಸಿ ಮೇಲೆ ವಿವರಿಸಿರುವ ಷರತ್ತುಗಳನ್ವಯ ಕಾರ್ಯನಿರ್ವಹಿಸಲು ಸೂಚಿಸಿ ಪುನಃಶ್ಚೇತನಗೊಳಿಸಿ ಆದೇಶಿಸಿದೆ.

ಸಮಾಪನಾಧಿಕಾರಿಗಳು ನಿಯಮಾನುಸಾರ ಕ್ರಮವಹಿಸಿ ಆಡಳಿತ ಮಂಡಳಿಗೆ ಸಂಘದ ಪ್ರಭಾರ ವಹಿಸಿಕೊಡಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ 10–02–2012 ರಂದು ನೀಡಿರುತ್ತೇನೆ.

**ಬಿ.ಹೆಚ್. ಮಂಜಪ್ಪ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಗೃಹ ಮತ್ತು ಇತರೆ)

**ಪಿ.ಆರ್. 211**

## ಸಹಕಾರ ಸಂಘಗಳ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52 ಇವರ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ವೆಸ್ಟ್ರನ್ ಇಂಡಿಯಾ ಹೆಂಚು ಉತ್ಪಾದಕರ ಖರೀದಿ ಮತ್ತು ಮಾರಾಟ ಸಹಕಾರ ಸಂಘ (ನಿ) ಮಂಗಳೂರು ಇದರ ನೋಂದಣಿ ರದ್ದತಿಗಾಗಿ ಪ್ರಸ್ತಾವೆಯನ್ನು ಸಲ್ಲಿಸುವ ಕುರಿತು.

**ಉಲ್ಲೇಖ:**
1. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ : ಸಸಂನಿ/ಸಮಾಪನೆ/54/2005–06, ದಿನಾಂಕ 20–4–2011.
2. ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಪತ್ರ ಸಂಖ್ಯೆ : ಎಆರ್–36/ ಎಸ್/5/ಸಮಾಪನೆ/17/2000–01, ದಿನಾಂಕ 10–1–2012.

**ಪ್ರಸ್ತಾವನೆ :**

ವೆಸ್ಟ್ರನ್ ಇಂಡಿಯಾ ಹೆಂಚು ಉತ್ಪಾದಕರ ಖರೀದಿ ಮತ್ತು ಮಾರಾಟ ಸಹಕಾರ ಸಂಘ (ನಿ) ಮಂಗಳೂರು ಈ ಸಂಘವು ಸಂಖ್ಯೆ : ಜೆಆರ್‌ಎಂ/ಆರ್‌ಸಿಎಸ್/8429/1984–85, ದಿನಾಂಕ 03–07–1984 ರಲ್ಲಿ ನೋಂದಣಿಯಾಗಿದ್ದು, ಜಿಲ್ಲಾ ಮಟ್ಟದ ಕಾರ್ಯ ವ್ಯಾಪ್ತಿಯನ್ನು ಹೊಂದಿರುತ್ತದೆ. 1994 ರಿಂದಲೂ ಯಾವುದೇ ಕಾರ್ಯವನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದ ಪ್ರಯುಕ್ತ ಈ ಕಛೇರಿಯ ಉಲ್ಲೇಖಿತ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಮಾರಾಟಾಧಿಕಾರಿ–II ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ 16–8–2011 ರಂದು ಸ್ವಯಂ ಪ್ರಭಾರವನ್ನು ವಹಿಸಿಕೊಂಡು, ಸದರಿ ಸಂಘದ ಆಸ್ತಿ ಜವಾಬ್ದಾರಿಯನ್ನು ಚುಕ್ತಾಗೊಳಿಸಿದ್ದು, ಒಟ್ಟು ರೂ.6500/– ರ ಮೊತ್ತವನ್ನು "ಸಹಕಾರ ಅಭಿವೃದ್ಧಿ ನಿಧಿ"ಗೆ ವರ್ಗಾಯಿಸಿ, ಆಸ್ತಿ–ಜವಾಬ್ದಾರಿಯ ತಃಖ್ತೆಯನ್ನು ಶೂನ್ಯಗೊಳಿಸಿ ಸಮಾಪನಾ ಪ್ರಕ್ರಿಯೆಯನ್ನು ಪೂರೈಸಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಉಲ್ಲೇಖ (2)ರವರ ಮುಖಾಂತರ ಸಲ್ಲಿಸಿರುತ್ತಾರೆ. ಸಾರ್ವಜನಿಕ ಪ್ರಕಟಣೆಯನ್ನು ದಿನಪತ್ರಿಕೆಯಲ್ಲಿ ನೀಡಲಾಗಿದ್ದು ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗಿರುವುದಿಲ್ಲ. ಸಂಘದ ಅಸ್ತಿತ್ವದ ಬಗ್ಗೆ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಆಸಕ್ತಿ ಇಲ್ಲದಿರುವುದು ದೃಢಪಟ್ಟಿರುವುದರಿಂದ ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕೋರಿ ಪ್ರಸ್ತಾವೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಮಾಪನಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಗಣಿಸಿ, ಶಿಫಾರಸ್ಸು ಮಾಡಿ ಪೂರ್ಣ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ ಇವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಮಾಪನಾಧಿಕಾರಿಯು ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದನ್ನು ಮತ್ತು ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ, ಸದರಿ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಿದೆ.

### ಆದೇಶ

**ಸಂಖ್ಯೆ : ಸ.ಸಂ.ನಿ./ಸಮಾಪನೆ/54/2005–06, ದಿನಾಂಕ 13ನೇ ಫೆಬ್ರವರಿ 2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ/139/ಸಿ.ಎಲ್.ಎಂ./ 2010, ದಿನಾಂಕ 17–02–2011 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು, (ಬಳಕೆ ಮತ್ತು ಮಾರಾಟ) ಆದ ನಾನು ಸಮಾಪನೆಗೊಂಡಿರುವ ವೆಸ್ಟ್ರನ್ ಇಂಡಿಯಾ ಹೆಂಚು ಉತ್ಪಾದಕರ ಖರೀದಿ ಮತ್ತು ಮಾರಾಟ ಸಹಕಾರ ಸಂಘ (ನಿ) ಮಂಗಳೂರು ಇದರ ನೊಂದಣಿ ಸಂಖ್ಯೆ : ಜೆಆರ್‌ಎಂ/ಆರ್‌ಸಿಎಸ್/8429/1984–85, ದಿನಾಂಕ 03–07–1984 ನ್ನು ರದ್ದುಪಡಿಸಿರುತ್ತೇನೆ. ಈ ನೊಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು. ಸದರಿ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಕಛೇರಿಗೆ ಒಪ್ಪಿಸಿ ಸ್ವೀಕೃತಿಯನ್ನು ಪಡೆದುಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 13-02-2012 ರಂದು ಹೊರಡಿಸಲಾಗಿದೆ.

**ಕೆ.ಹೆಚ್. ತಿಮ್ಮಯ್ಯ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಬಳಕೆ ಮತ್ತು ಮಾರಾಟ).

**ಪಿ.ಆರ್. 213**

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ಕೋಲಾರ ಉಪ ವಿಭಾಗ, ಕೋಲಾರ

**ಸಂಖ್ಯೆ : ಎ.ಆರ್.ಕೆ.ಎ.ಬಿ.ಎನ್./ಸರೆಚಾರ್ಜ್-20/2011-12, ದಿನಾಂಕ 09ನೇ ಫೆಬ್ರವರಿ 2012**

**ವಿಷಯ:** ಆದೇಶಪೂರ್ವ ಜಪ್ತಿಗೆ ಈಡು ಮಾಡಿದ್ದು, ಸ್ವತ್ತುಗಳ ಪೈಕಿ ಕೆಲ ಸ್ವತ್ತುಗಳನ್ನು ಕರ್ನಾಟಕ ಅಪೀಲ್ ನ್ಯಾಯಾಧೀಕರಣ, ಬೆಂಗಳೂರು ಇವರ ಆದೇಶದಂತೆ ಬಿಡುಗಡೆ ಮಾಡುವ ಕುರಿತು.

**ಉಲ್ಲೇಖ:** 5. ಶ್ರೀ ಎನ್. ನಾರಾಯಣಸ್ವಾಮಿ, ಮಾಜಿ ಕಾರ್ಯದರ್ಶಿ, ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ (ನಿ) ಮಾಲೂರು ಇವರ ಪತ್ರ ದಿನಾಂಕ 01-02-2012.

6. ಕರ್ನಾಟಕ ಅಪೀಲ್ ನ್ಯಾಯಾಧೀಕರಣ, ಬೆಂಗಳೂರು ಇದರ ಅಪೀಲು ಸಂಖ್ಯೆ : 648/2011 ರ ಆದೇಶ ದಿನಾಂಕ 27-01-2012.

7. ಈ ಕಛೇರಿಯ ಆದೇಶ ಸಂಖ್ಯೆ : ಎಆರ್‌ಕೆ/49/ಎಂ.ಕೆ.ಟಿ./ಎ.ಬಿ.ಜೆ/7/2006-07, ದಿನಾಂಕ 28/29-06-2006.

**ಪೀಠಿಕೆ :**

ಶ್ರೀ ಎನ್. ನಾರಾಯಣಸ್ವಾಮಿ ಬಿನ್ ನಂಜಪ್ಪ, ಮಾಲೂರು ಇವರ ವಿರುದ್ಧ ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ (ನಿ) ಮಾಲೂರು ಇದರ ಲೆಕ್ಕ ಪರಿಶೋಧನಾ ವರದಿ 2000-2001 ರ ರೀತ್ಯಾ ಸದರಿಯವರು ಸಂಘದ ಪ್ರಭಾರ ಕಾರ್ಯದರ್ಶಿಯಾಗಿದ್ದು, ಕಾರ್ಯನಿರ್ವಹಿಸಿದ್ದ ಅವಧಿಯಲ್ಲಿ ಅದಿಬಾರ ದಾವೆ 20/2005-06 ರಲ್ಲಿ ರೂ. 5,00,200-00 ಗಳು ಹಾಗೂ ಅದಿಬಾರ ದಾವೆ 21/2005-06 ರಲ್ಲಿ ರೂ. 12,38,500-00 ರೂ.ಗಳು ದಾವೆಗಳಲ್ಲಿ ಪ್ರತಿವಾದಿಯಾದ ಶ್ರೀ ಎನ್. ನಾರಾಯಣಸ್ವಾಮಿ ಇವರಿಂದ ವಸೂಲಿಗೆ ದಿನಾಂಕ 23-07-2011 ಮತ್ತು 25-07-2011 ರಂದು ಆದೇಶಿಸಲಾಯ್ತು. ದಿನಾಂಕ 29-06-2006 ರಂದು ಶ್ರೀ ಎನ್. ನಾರಾಯಣಸ್ವಾಮಿ ಇವರ 07 (ಏಳು) ಸ್ಥಿರಾಸ್ತಿಗಳನ್ನು ಈ ಕಛೇರಿಯ ಆದೇಶ ಸಂಖ್ಯೆ : ಎಆರ್‌ಕೆ-49/ಎಂಕೆಟಿ/ಎಬಿಜೆ-7/2006-07, ದಿನಾಂಕ 28/29-06-2006 ರಂದು ಆದೇಶ ಪೂರ್ವ ಜಪ್ತಿ (ಪ್ರಕರಣಗಳ ಆದೇಶದ ತೀರ್ಪನ್ನು ಕಾಯ್ದಿರಿಸಿ) ಮಾಡಲು ಆದೇಶಿಸಲಾಗಿತ್ತು.

ಶ್ರೀ ಎನ್. ನಾರಾಯಣಸ್ವಾಮಿಯವರು ಅದಿಬಾರ ದಾವೆ ಸಂಖ್ಯೆ : 20/2005-06ರ ವಿರುದ್ಧ ಕರ್ನಾಟಕ ಅಪೀಲ್ ನ್ಯಾಯಾಧೀಕರಣ, ಬೆಂಗಳೂರು ಇದರಲ್ಲಿ ಅಪೀಲು ಸಂಖ್ಯೆ : 648/2011 (ಕೋಅಪ್) ಅಪೀಲು ಸಲ್ಲಿಸಿದ್ದು, ದಿನಾಂಕ 24-11-2011 ರ ನ್ಯಾಯಾಧೀಕರಣದ ಆದೇಶದಂತೆ ದಾವೆಯ ಪೂರ್ಣ ಮೊತ್ತದ ಪೈಕಿ ಶೇ. 25% ಡಿಪಾಜಿಟ್ಟು ಮಾಡಿ ಮಧ್ಯಂತರ ಆದೇಶ ಪಡೆಯಲು ಸೂಚಿಸಿರುತ್ತಾರೆ.

ನ್ಯಾಯಾಧೀಕರಣದ ಅಪೀಲು ಆದೇಶ ದಿನಾಂಕ 16-12-2011 ರಲ್ಲಿ ಎರಡು ದಾವೆಗಳ ಆದೇಶದ ಮೊತ್ತ ಒಟ್ಟು ಮೊತ್ತ ರೂ.17,00,200.00 ರೂ.ಗಳ ಶೇ.25% ರಷ್ಟು ಹಣ ಡಿಪಾಜಿಟ್ಟು ಮಾಡಲು ಸೂಚಿಸಿದ್ದು, ಇದರಂತೆ ಅರ್ಜಿದಾರರಾದ ಶ್ರೀ ಎನ್. ನಾರಾಯಣಸ್ವಾಮಿಯವರು ಒಂದುನೂರು ರೂಪಾಯಿಯ ಛಾಪಾ ಕಾಗದದಲ್ಲಿ ನೋಟರಿ ಮೂಲಕ ಪ್ರಮಾಣ ಪತ್ರದಲ್ಲಿ ಸಲ್ಲಿಸಿರುತ್ತಾರೆ.

ಮಾನ್ಯ ಕರ್ನಾಟಕ ಅಪೀಲ್ ನ್ಯಾಯಾಧೀಕರಣದ ಅಪೀಲು ಸಂಖ್ಯೆ : 648/2011 ದಿನಾಂಕ 27-01-2012 ರ ಆದೇಶದಲ್ಲಿನ ನಿರ್ದೇಶನದಂತೆ ಅರ್ಜಿದಾರರಾದ ಶ್ರೀ ಎನ್. ನಾರಾಯಣಸ್ವಾಮಿ ಇವರ 07 (ಏಳು) ಸ್ಥಿರಾಸ್ತಿಗಳನ್ನು ಆದೇಶ ಜಪ್ತಿಗೆ ಈ ಕಛೇರಿಯ ಆದೇಶ ಸಂಖ್ಯೆ: ಎಆರ್ 49/ಎಂಕೆಟಿ/ಎಬಿಜೆ-07/2006-07, ದಿನಾಂಕ 28/29-06-2006 ರಂತೆ ಆದೇಶಿಸಿರುವ ಸ್ವತ್ತುಗಳ ಪೈಕಿ ಮಾನ್ಯ ಕರ್ನಾಟಕ ಅಪೀಲು ನ್ಯಾಯಾಧೀಕರಣ, ಬೆಂಗಳೂರು ಇವರ ಅಪೀಲು ಸಂಖ್ಯೆ : 648/2011, ದಿನಾಂಕ 27-01-2012ರ ಆದೇಶದಂತೆ ಈ ಕೆಳಕಂಡ ಮೂರು ಸ್ಥಿರಾಸ್ಥಿ ಸ್ವತ್ತುಗಳನ್ನು ಆದೇಶ ಪೂರ್ವ ಜಪ್ತಿ ಆದೇಶದಿಂದ ಬಿಡುಗಡೆಗೊಳಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1960ರ ನಿಯಮ 47 (3) (ಎ) ರೀತ್ಯಾ ಅರ್ಜಿದಾರರ ಅಪೀಲು ನ್ಯಾಯಾಧೀಕರಣ ಬೆಂಗಳೂರು ಇವರ ಆದೇಶದಂತೆ ಇವರ ವಿರುದ್ಧ ಆದೇಶಿಸಿರುವ ಎರಡು ಸರ್‌ಚಾರ್ಜ್ ದಾವೆಗಳ ಆದೇಶದ ಮೊತ್ತ ರೂ. 17,00,200-00 ಎಂದು ಆದೇಶದಲ್ಲಿ ತಿಳಿಸಿದ್ದು, ದಾವೆ ಸಂಖ್ಯೆ : 20/2005-06 ಮತ್ತು 21/2005-06 ಇವುಗಳ ಮೊತ್ತ ರೂ.5,00,200-00 ಮತ್ತು ರೂ. 12,38,500-00 ಗಳಾಗಿ ಒಟ್ಟು ರೂ. 17,38,700-00 ಗಳಾಗುತ್ತದೆ. ಮೇಲೆ ವಿವರಿಸಿರುವ ಆದೇಶಗಳ ಮೊಬಲಗಿನ ಪೈಕಿ ಶೇ. 25 ರಷ್ಟು ಅಪೀಲಿನ ಎರಡನೇ ಪ್ರತಿವಾದಿ ಸಂಘದಲ್ಲಿ ಡಿಪಾಜಿಟ್ಟು ಮಾಡಲು ಒಪ್ಪಿ ಪ್ರಮಾಣ ಪತ್ರ ಸಲ್ಲಿಸಿರುವ ಹಿನ್ನೆಲೆಯಲ್ಲಿ ಈ ಸ್ವತ್ತುಗಳ

ಮಾರಾಟ/ಆಧಾರ ಮಾಡಿ ತಕ್ಷಣ ಪಾವತಿಸುವ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್ ನಲ್ಲಿ ವಿವರಿಸಿರುವ ಮೂರು ಸ್ವತ್ತುಗಳನ್ನು ಬಿಡುಗಡೆ ಮಾಡುವುದು ಸೂಕ್ತ ಎಂದು ಪರಿಗಣಿಸಿ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ವಿವರವಾಗಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್. ನಾರಾಯಣಸ್ವಾಮಿ, ಮಾಜಿ ವ್ಯವಸ್ಥಾಪಕ ನಿರ್ದೇಶಕರು, ದ್ಯಾಪಸಂದ್ರ ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಸಂಘ (ನಿ) ಮಾಲೂರು ತಾಲ್ಲೂಕು ಇದರ ಏಳು ಐಟಂ ಸ್ಥಿರಾಸ್ತಿಗಳನ್ನು ಈ ಹಿಂದೆ ಈ ಕಛೇರಿಯ ಆದೇಶ ಸಂಖ್ಯೆ : ಎಆರ್ 49/ಎಂಕೆಟಿ/ಎಬಿಜೆ-07/2006-07, ದಿನಾಂಕ 29-06-2006 ರಂದು ಆದೇಶ ಪೂರ್ವ ಜಪ್ತಿಗೆ ಆದೇಶಿಸಿದ್ದು, ಕರ್ನಾಟಕ ಅಪೀಲ್ ನ್ಯಾಯಾಧೀಕರಣ, ಬೆಂಗಳೂರು ಇವರ ಅಪೀಲು ಸಂಖ್ಯೆ : 648/2011, ದಿನಾಂಕ 27-01-2012ರ ನಿರ್ದೇಶನದಂತೆ ಈ ಕೆಳಕಂಡ 03 (ಮೂರು) ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ಉಪನಿಯಮ 47 (3) (ಎ) ರೀತ್ಯಾ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

ಉಲ್ಲೇಖ (3)ರ ಆದೇಶದಂತೆ ಕಲಂ 103 ರನ್ವಯ ಆದೇಶ ಪೂರ್ವ ಜಪ್ತಿಗೊಳಪಡಿಸಿದ ಈ ಕೆಳಕಂಡ 03 ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿ ಕ್ರಮದಿಂದ ಬಿಡುಗಡೆ ಮಾಡಲಾಗಿದ್ದು, ಮಾರಾಟ/ಆಧಾರ ಕ್ರಮದಿಂದ ಸ್ವೀಕೃತವಾದ ಹಣದಿಂದ ಉಲ್ಲೇಖ (2) ರ ಮಾನ್ಯ ಕೆ.ಎ.ಟಿ. ಆದೇಶದಂತೆ ಶೇ.25 ರಷ್ಟು ಹಣವನ್ನು ಸ್ಥಿರಾಸ್ತಿಗಳು ಮಾರಾಟ/ಆಧಾರವಾದ ಒಂದು ವಾರದೊಳಗಾಗಿ ಎರಡನೇ ಪ್ರತಿವಾದಿ ಸಂಘಕ್ಕೆ ಪಾವತಿಸಿ, ಪಾವತಿಸಿದ ಬಗ್ಗೆ ಸ್ವೀಕೃತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಮೇಲಿನ ಷರತ್ತು ಪಾಲಿಸದಿದ್ದಲ್ಲಿ ಈ ಆದೇಶವನ್ನು ತಕ್ಷಣ ರದ್ದುಪಡಿಸಲಾಗುವುದೆಂದು ತಿಳಿಯತಕ್ಕದ್ದು.

| ಕ್ರ. ಸಂ. | ಗ್ರಾಮ | ಸರ್ವೆ ನಂ. | ಖಾತೆ ಸಂಖ್ಯೆ | ವಿಸ್ತೀರ್ಣ | ತರಹೆ | ಅನುಭವದಾರರು |
|---|---|---|---|---|---|---|
| 1) | ತೊರಲಕ್ಕಿ ಗ್ರಾಮ, ಮಾಲೂರು ತಾಲೂಕು | 18 | 39 | ಎ.ಗುಂ 2-36 | ಖುಷ್ಕಿ | ಶ್ರೀ ಎನ್. ನಾರಾಯಣಸ್ವಾಮಿ |
| 2) | ಬೈರನಹಳ್ಳಿ ಗ್ರಾಮ | 10 | 242/ ಟಿ-18 | 3-00 | ಖುಷ್ಕಿ | ಶ್ರೀಮತಿ ಮಮತ ಕೋಂ. ಕೆ. ಮುನಿರಾಜು (ಅರ್ಜಿದಾರರ ಪುತ್ರಿ) |
| 3) | ತೊರಲಕ್ಕಿ ಗ್ರಾಮ, ಮಾಲೂರು ತಾಲೂಕು | 05 | 134 | 3-21 | ಖುಷ್ಕಿ | ಶ್ರೀ ಎನ್. ನಾರಾಯಣಸ್ವಾಮಿ |

ಈ ಆದೇಶವನ್ನು ಈ ದಿನ ದಿನಾಂಕ 09-02-2012 ರಂದು ನನ್ನ ಸಹಿ ಮತ್ತು ಈ ಕಛೇರಿಯ ಮುದ್ರೆಯೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಕೋಲಾರ ಉಪ ವಿಭಾಗ, ಕೋಲಾರ.

**ಪಿ.ಆರ್. 214**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 325 ಬೆಂಭೂಸ್ವಾ 2011, ಬೆಂಗಳೂರು, ದಿನಾಂಕ 08ನೇ ಫೆಬ್ರವರಿ 2012**

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಜೆ.ಬಿ.ಕಾವಲ್ ಗ್ರಾಮದ ಸರ್ವೆ ನಂ. 1 (117) ರಲ್ಲಿನ 1 ಎಕರೆ ಜಮೀನನ್ನು ಭೂಸ್ವಾಧೀನ ಕಾಯ್ದೆ ಕಲಂ 48(1) ರನ್ವಯ ಭೂಸ್ವಾಧೀನದಿಂದ ಕೈಬಿಟ್ಟು ಹೊರಡಿಸಲಾಗಿದ್ದ ದಿನಾಂಕ 12-01-2010 ರ ಅಧಿಸೂಚನೆ ಸಂಖ್ಯೆ : UDD 745 MNX 2001 ನ್ನು ಪುನರ್ ಪರಿಶೀಲಿಸಲಾಗಿದ್ದು, ಸದರಿ ಅಧಿಸೂಚನೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಚಂದ್ರಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 216**

**GOVERNMENT OF KARNATAKA**

## DIRECTORATE OF ECONOMICS AND STATISTICS

**BANGALORE-1**

### Consumer Price Index Numbers for Industrial Workes

**No. DES 10 PWX 2011** **Month : December 2011**

**State : Karnataka** **Base:1987-88=100** **Date : 03-02-2012**

| | Group/Sub-Group | Bell-ary | Bhad-ra-vathi | Da-van-gere | Dan-deli | Gul-bar-ga | Hari-har | Has-san | Man-dya | Mangalore | Rai-chur | Turnkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | FOOD: | | | | | | | | | | | |
| | (a) Cereals & Products | 705 | 644 | 748 | 691 | 724 | 688 | 616 | 691 | 617 | 804 | 605 |
| | (b) Pulses & Products | 571 | 657 | 670 | 747 | 605 | 596 | 662 | 671 | 643 | 641 | 619 |
| | (c) Oil & Fats | 360 | 388 | 400 | 406 | 435 | 404 | 382 | 432 | 290 | 379 | 393 |
| | (d) Meat, Fish & Eggs | 729 | 813 | 801 | 690 | 818 | 754 | 717 | 787 | 766 | 1016 | 714 |
| | (e) Milk & Products | 481 | 493 | 552 | 609 | 516 | 569 | 473 | 587 | 490 | 519 | 457 |
| | (f) Condiments & Spices | 503 | 617 | 765 | 823 | 512 | 432 | 589 | 668 | 620 | 755 | 682 |
| | (g) Vegetables & Fruits | 570 | 530 | 652 | 821 | 572 | 539 | 704 | 613 | 550 | 554 | 730 |
| | (h) Other Food | 495 | 767 | 689 | 648 | 581 | 522 | 569 | 580 | 482 | 507 | 527 |
| | **FOOD GROUP INDEX** | 590 | 629 | 686 | 677 | 621 | 584 | 593 | 656 | 579 | 682 | 583 |
| II | Pan, Supari, Tobacco & Intoxicants | 547 | 761 | 714 | 489 | 468 | 673 | 632 | 552 | 415 | 552 | 696 |
| III | Fuel & Light | 476 | 451 | 549 | 641 | 518 | 537 | 533 | 577 | 408 | 657 | 396 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 284 | 464 | 382 | 390 | 367 | 286 | 447 | 606 | 309 | 634 | 234 |
| VI. | **Miscellaneous:** | | | | | | | | | | | |
| | (a) Medical Care | 663 | 914 | 494 | 457 | 359 | 275 | 456 | 511 | 354 | 429 | 262 |
| | (b) Education, Recreation & Amusement | 567 | 538 | 831 | 290 | 650 | 667 | 600 | 466 | 713 | 786 | 809 |
| | (c) Transport & Communication | 692 | 633 | 654 | 526 | 667 | 688 | 603 | 577 | 613 | 494 | 621 |
| | (d) Personal Care & effects | 375 | 400 | 452 | 394 | 459 | 369 | 365 | 424 | 449 | 351 | 352 |
| | (e) Others | 451 | 466 | 546 | 571 | 388 | 364 | 370 | 520 | 349 | 577 | 360 |
| | Miscellaneous Group | 504 | 523 | 579 | 441 | 490 | 434 | 451 | 483 | 489 | 516 | 451 |
| | GENERAL INDEX | 487 | 523 | 561 | 538 | 493 | 469 | 506 | 552 | 480 | 581 | 428 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

for Director

**GOVERNMENT OF INDIA**

## MINISTRY OF LABOUR

**LABOUR BUREAU CLEREMONT, SHIMLA-171004**

**Consumer Price Index Numbers for Industrial Workers (Base 2001-100)**

**MONTH : DECEMBER 2011**

| Group/Sub-group/Centre | Bangalore | Belgaum | Hubli-Dharwar | Mercara | Mysore |
|---|---|---|---|---|---|
| **Food** | | | | | |
| (a) Cereals & Products | 170 | 237 | 211 | 175 | 159 |
| (b) Pulses and Products | 212 | 222 | 240 | 228 | 228 |
| (c) Oils & Fats | 223 | 224 | 217 | 226 | 208 |
| (d) Meat, Fish & Eggs | 252 | 298 | 269 | 230 | 270 |
| (e) Milk Products | 195 | 195 | 189 | 187 | 202 |
| (f) Condiments & Spices | 216 | 186 | 230 | 217 | 217 |
| (g) Vegetables & Fruits | 204 | 266 | 239 | 235 | 232 |
| (h) Other Food | 232 | 210 | 209 | 206 | 210 |
| FOOD GROUP | 206 | 229 | 218 | 204 | 204 |
| Pan, Supari, Tobacco & Intoxican | 191 | 195 | 189 | 166 | 206 |
| Fuel and Light | 153 | 182 | 157 | 339 | 173 |
| Housing Index | 205 | 199 | 227 | 101 | 212 |
| Clothing, Bedding and Footwear | 130 | 148 | 149 | 163 | 164 |
| Miscellaneous | | | | | |
| (a) Medical care | 203 | 187 | 162 | 175 | 159 |
| (b) Education, Recreation & Amusement | 173 | 148 | 202 | 166 | 117 |
| (c) Transport and Communication | 266 | 250 | 258 | 194 | 210 |
| (d) Personal Care & Effects | 201 | 162 | 179 | 172 | 185 |
| (e) Others | 199 | 175 | 152 | 194 | 188 |
| Miscellaneous Group | 215 | 184 | 192 | 179 | 170 |
| GENERAL INDEX | 199 | 207 | 206 | 197 | 193 |

**P.N. KAUNDAL,**
**ECONOMIC OFFICER.**

**P.R. 218**

## OFFICE OF THE LAND ACQUISITION OFFICER, BDA, BANGALORE

**NOTIFICATION UNDER SECTION 16(2) OF THE LAND ACQUISITION ACT 1894**

**No. BDA/LAO/946/11-12, dated : 6-2-2012.**

The lands mentioned below have been acquired as per Government Notification No. UDD/716/MNX/94 dated 24/5/1996 published in the Karnataka Gazette dated 3-6-1996 for the formation of layout called **"Sajjepalya Layout."**

In exercise of the powers conferred under Section (2) of the section 16 of the land acquisition Act (Karnataka Extension and Amendment Act 1961) it is hereby notified for the information of General Public that the properties noted in the scheduled below have been acquired and taken possession by my predecessor from owners for formation of **"Sajjepalya layout."** by the BDA., Kumara Park West, Bangalore-560020 and the same vest with BDA, Bangalore free from all encumbrance. The Publice are hereby informed that they should restrain form entering into any kind of transaction with the Khatedars of the Survey Number noted below :

**Scheme-Sajjepalya Layout**

Taluk : Bangalore North Hobli : Yeshwanthapura Village : Sajjepalya

| Sl. No. | LAC No. | Village | Sy. No. | Extent A-G | Date of taking Possession |
|---|---|---|---|---|---|
| 1. | 20/96-97 | Sajjepalya | 20 | 2-00 | 14-10-1997 |
| 2 | 21/96-97 | -do- | 21 | 1-39 | 14-10-1997 |
| 3. | 22/96-97 | -do- | 22 | 2-00 | 14-10-1997 |
| 4. | 23/96-97 | -do- | 23 | 2-01 | 14-10-1997 |
| 5. | 24/96-97 | -do- | 24 | 2-01 | 14-10-1997 |

**B. BORAIAH**
Land Acquisition Officer,
BDA., Bangalore.

**P.D. 31**

## OFFICE OF THE LAND ACQUISITION OFFICER, BDA, BANGALORE

### NOTIFICATION UNDER SECTION 16(2) OF THE LAND ACQUISITION ACT 1894

### No. BDA/LAO/167/11-12, dated : 7-2-2012.

The lands mentioned below have been acquired as per Government Notification No. UDD/873/MNX/2010 dated 13-7-2011 published in the Karnataka Gazette dated 22-9-2011 for the formation of layout called **"Widening of Road and Construction of Cable Bridge Loop at K.R.Puram Railway Station."**

In exercise of the powers conferred under Section (2) of the section 16 of the land acquisition Act (Karnataka Extension and Amendment Act 1961) it is hereby notified for the information of General Public that the properties noted in the scheduled below have been acquired and taken possession from owners for formation of **"Widening of Road and Construction of Cable Bridge Loop at K.R.Puram Railway Station."** by the BDA., Kumara Park West, Bangalore-560020 and the same vest with BDA, Bangalore free from all encumbrance. The Public are hereby informed that they should restrain form entering into any kind of transaction with the Khatedars of the Survey Number noted below :

**Scheme-Widening of Road and Construction of Cable Bridge Loop at K.R.Puram Railway Station**

Taluk : Bangalore East Hobli : K.R. Puram Village : Vijinapura

| Sl. No. | LAC No. | Village | Sy. No. | Extent A-G | Date of taking Possession |
|---|---|---|---|---|---|
| 1. | 1/2011-12 | Vijinapura | 91 | 1-20 | 21-1-2012 |
| 2 | 2/2011-12 | Vijinapura | 89 | 0-5 ¾ | 6-2-2012 |

**B. BORAIAH**
Land Acquisition Officer,
BDA., Bangalore.

**P.D. 32**

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

### ಉಪ ಆಯುಕ್ತರು (ಭೂಸ್ವಾಧೀನ) ರವರ ಕಛೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ಮೊದಲನೇ ಮಹಡಿ, ಹೊಸ ಕಟ್ಟಡ (ಮೇಜರ್ ರೋಡ್ಸ್), ಅನೆಕ್ಸ್ ಬಿಲ್ಡಿಂಗ್ ಹಿಂಭಾಗ, ಎನ್.ಆರ್. ವೃತ್ತ, ಬೆಂಗಳೂರು–02

### ತಿದ್ದುಪಡಿ ಅಧಿಸೂಚನೆ

### ಸಂ: ಎಲ್‌ಎಕ್ಯೂ/ಸಿಆರ್/58/2010–11, ಬೆಂಗಳೂರು, ದಿನಾಂಕ : 28–12–2011

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಚಿಕ್ಕಲಸಂದ್ರ ವಾರ್ಡ್ ನಂ.–183 (ಹಳೆ ವಾರ್ಡ್ ನಂ. 55) ಇಟ್ಟುಮಡು 2ನೇ ಮುಖ್ಯರಸ್ತೆ, ಬನಶಂಕರಿ 3ನೇ ಹಂತ ರಸ್ತೆ ವಿಸ್ತರಣೆ ಮಾಡುವ ಸಂಬಂಧ ಇಟ್ಟುಮಡು ಗ್ರಾಮದ ಸ್ವತ್ತಿನ ಸಂಖ್ಯೆ : 2, 2/ಎ(ಹಳೆ ಸರ್ವೆ ನಂ.–6/1, 6/2) ರಲ್ಲಿ ಬರುವ ವಿಸ್ತೀರ್ಣ 620.60 ಚ.ಅ. ಜಾಗವನ್ನು ರಸ್ತೆ ಅಗಲೀಕರಣಕ್ಕೆ ಭೂಸ್ವಾಧೀನ ಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯ ಕಲಂ 4(1) ರನ್ವಯ ಅಧಿಸೂಚನೆಯನ್ನು ದಿನಾಂಕ : 27–8–2011 ರಂದು ಹೊರಡಿಸಲಾಗಿದ್ದು, ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ

ದಿನಾಂಕ : 20–10–2011 ರಂದು ಭಾಗ–3, ಪುಟ ಸಂಖ್ಯೆ : 3557 ರಲ್ಲಿ ಪ್ರಕಟವಾಗಿದ್ದು, ಈ ಅಧಿಸೂಚನೆಯಲ್ಲಿ ಶ್ರೀಮತಿ ಉಷಾ ಶ್ರೀಕಂಠನ್ ಬದಲಿಗೆ ಶ್ರೀಮತಿ ಉಷಾ ಶ್ರೀಕಾಂತನ್ ಎಂದೂ ಹಾಗೂ ಶ್ರೀ ಪ್ರದೀಪ್ ಶ್ರೀಕಂಠನ್ ಬದಲಿಗೆ ಶ್ರೀ ಪ್ರದೀಪ್ ಶ್ರೀಕಾಂತನ್ ಎಂದೂ ದಿನಾಂಕ : 29–11–2011 ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿ ಅಧಿಸೂಚನೆಯು ದಿನಾಂಕ : 15–12–2011ರ ಕರ್ನಾಟಕ ರಾಜ್ಯಪತ್ರದಲ್ಲಿ (ಭಾಗ 3, ಪುಟ–4236, ಪಿ.ಡಿ. 177) ಪ್ರಕಟವಾಗಿದ್ದು, ಇದರ ನಾಲ್ಕನೇ ಸಾಲಿನಲ್ಲಿ ಅಂತಿಮ ಅಧಿಸೂಚನೆಯನ್ನು ಎಂದು ಪ್ರಕಟಿಸಲಾಗಿದ್ದು, ಇದನ್ನು ಪ್ರಾರಂಭಿಕ ಎಂದು ಓದಿಕೊಳ್ಳತಕ್ಕದ್ದು ಎಂದು ಈ ಮೂಲಕ ತಿಳಿಯಪಡಿಸಿದೆ. ಉಳಿದಂತೆ ಇನ್ಯಾವುದೇ ಬದಲಾವಣೆಗಳು ಇರುವುದಿಲ್ಲ.

**ಉಪ ಆಯುಕ್ತರು (ಭೂಸ್ವಾಧೀನ)**
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಪಿ.ಡಿ. 197**

Registration No. : L85110KA1980PLC004038
Nominal Capital : Rs. 2,00,00,000/-

**FORM NO. 151**
**[See Rule 315]**
**COMPANIES ACT, 1956**
**Member's (or Creditor's) Voluntary Winding-up**
**Notice of appointment of liquidator pursuant to Section 516**

| | | |
|---|---|---|
| Name of the Company | : | OSWALI CHEMICALS LIMITED |
| Nature of business | : | Manufacture of Beta Naphthol |
| Address of Registered office | : | No. 1/8, Artillery Road, Halasuru, Bangalore-560008 |
| Name(s) and address (s) of Liquidators | : | V. SUNDAR,<br>1/8, Artillery Road., Halasuru, Bangalore-560008 |
| Permanent Account Number | : | ACDPS8446H |
| Date of appointment | : | 2nd February 2012 |
| By whom appointed | : | Members in General Meeting (Resolution annexed) |

Dated the 2nd day of February 2012

For OSWALI CHEMICALS LIMITED
**V. MURALI**
Director.

Registration No. : L85110KA1980PLC004038
Nominal Capital : Rs. 2,00,00,000/-

**FORM NO. 152**
**[See Rule 315]**
**COMPANIES ACT, 1956**
**Member's (or Creditor's) Voluntary Winding-up**
**Notice of appointment of liquidator pursuant to section 516**

| | | |
|---|---|---|
| Name of the Company | : | OSWALI CHEMICALS LIMITED |
| Nature of business | : | Manufacture of Beta Naphthol |
| Presented by | : | V. SUNDAR, |

To,
The Registrar of Companies
Karnataka, Bangalore

I, V. SUNDAR, of No. 1/8, Artillery Road, Halasuru, Bangalore-560008 hereby give notice that I have been appointed as the liquidator of OSWALI CHEMICALS LIMITED by * resolution of the company dated 2nd February 2012.

Dated the 2nd day of February 2012

For OSWALI CHEMICALS LIMITED
(Under Voluntary Winding Up)
**V. SUNDAR**
Liquidator.

Note: * State how appointed, whether by resolution of the Company, creditors of the company or otherwise
*To be signed by each liquidator if more than one.

## OSWALI CHEMICALS LIMITED

**(Under Voluntary Winding Up)**

**Regd Office : 1/8, Artillery Road, Halasuru, Bangalore-560008**

**NOTICE**

Notice is hereby given for general information that the members of OSWALI CHEMICALS LIMITED have, at an Extra ordinary General meeting of the Company held on Thursday, the 2nd February 2012, passed the following special resolution to wind up the company voluntarily.

"RESOLVED THAT pursuant to Section 484 and other provisions of the Companies Act, 1956, applicable if any, the company be wound up voluntarily and that Mr. V. SUNDAR, Director be hereby authorised to give notice of the resolution by advertisement in the Official Gazette and also in two newspapers, one in English and one in the vernacular language circulating in the district of the Registered Office of the company within fourteen days from the date of passing of the resolution."

Any person who objects to the voluntary winding up of the company by members may send his representation to Mr. V. SUNDAR, Liquidator of the company appointed by the members of the company in the aforesaid extra ordinary general meeting within 10 days of publication of this notice, addressed to the Registered Office of the company.

For OSWALI CHEMICALS LIMITED

Dated this 3rd day of February 2012

(Under Voluntary Winding Up)

**V. SUNDAR**

**P.D. 16**

Liquidator.

**FORM NO. 155**

**[See Rule 329]**

**Member's Voluntary Winding-up**

**Name of the Company : OSWALI CHEMICALS LIMITED**

**Notice of Final Meeting**

Notice is hereby given in pursuance to Section 497 of the Companies Act, 1956, that a General Meeting of the Members of the above named Company will be held at 1/8, Artillery Road, Halasuru, Bangalore 560008 on Thursday, the 22nd day of MARCH 2012 at 4.00 P.M. for the purpose of having an account laid before them showing the manner in which the winding-up has been conducted and the property of the company disposed of and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

For OSWALI CHEMICALS LIMITED

Dated this 17th day of February 2012

(Under Voluntary Winding Up)

**V. SUNDAR**

**P.D. 23**

Liquidator.

## MINISTRY OF SHIPPING

**NEW MANGALORE PORT TRUST**

**Panambur, Mangalore**

**NOTIFICATION**

**No. 2/2/2010/Adm 1 dated the 3rd February 2012.**

Inexercise of the powers conferred by Sub-section (1) of Section 124, read with sub-section (1) of Section 132 of the Major Port Trusts Act, 1963 (38 of 1963), the Board of Trustees of New Managalore Port Trust hereby approves the New Managalore Port Trust Employees (Recruitment, Seniority and Promotion) Amendment Regulations 2012 as set-out in the Schedule annexed to this notification.

The said Regulations shall come into force from the date of publication of this Notification in the Official Gazette.

**Capt. B. Tewari**
Secretary

**SCHEDULE**

**NEW MANGALORE PORT TRUST**

New Mangalore Port Trust Employees (Recruitment, Seniority and Promotion) Amendment Regulations, 2012.

In exercise of the powers conferred by Section 28 of the Major Port Trusts Act, 1963, (38 of 1963), the Board of Trustees of the New Mangalore Port Trust hereby makes the following regulations further to amend the New Mangalore Port Trust Employees (Recruitment, Seniority and Promotion) Regulations 1980 and amended from time to time.

1. These Regulations may be called the New Mangalore Port Trust Employees (Recruitment, Seniority and Promotion) Amendment Regulation 2012.
2. In the existing New Mangalore Port Trust Employees (Recruitment, Seniority and Promotion) Regulations 1980 amended from time to time, delete the existing schedule 12(C) and substitute the new schedules as 12 (D).

| Sl. No. | Name of the post | No of Posts | Classification | Scale of Pay (`) | Whether Selection or Non-Selection | Upper Age limit for direct recruitment (in yrs.0 | Educational and other qualifications prescribed for direct recruitment | Whether (a) Age (b) Educational Qualifications (c) Experience for direct recruits will apply in case of promotion/ absorption/ deputation | Period of Probation (in years) | Method of recruitment (whether by direct recruitment or by promotion/ absorption/ deputation) | In case of promotion/ absorption/ deputation grades from which it should be made | Remarks |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 12 (D) | Assistant Estate Officer | 1 | Class-II | 16400-40500 | Selection | 40 years | Essential :- 1) Degree of recognised University or Diploma in Civil Engineering with 5 years experience in supervisory capacity of work dealing with revenue collection, land survey, lease of land etc., Desirable : Degree in Law. | Age : No. Qualification : Yes Experience : No. But, he/she should have 5 years experience in supervisory capacity | 2 years | Promotion, failing which by transfer, failing both by direct recruitment | Promotion : Estate Supdt. With 3 years regular service in the grade, failing which by transfer from AE(C)/ Asst. Secy./ AAO | Nil |

**Capt. B. Tewari**
Secretary

**भारत सरकार**
**पोत परिवहन मंत्रालय**
**पणंबूर, मंगलूर**
**अधिसूचना**
**सं0 2/2/2010/प्रशा 1 दिनांक 3 फरवरी 2012**

केन्द्र सरकार, महा पत्तन न्यास अधिनियम, 1963 (1963 का 38) की धारा 132 की उपधारा (1) के साथ पठित धारा 124 की उपधारा (1) द्वारा प्रदत्त शक्तियों का प्रयोग करते हुए, नव मंगलूर पत्तन न्यास के न्यासी मंडल द्वारा बनाए गए और इस अधिसूचना के साथ संलग्न अनुसूची में दिए गए नव मंगलूर पत्तन न्यास कर्मचारी (भर्ती, वरीयता व पदोन्नति) संशोधन विनियम 2012 का अनुमोदित करती है ।

2 उक्त विनियम भारत के राजपत्र में प्रकाशन की तारीख से प्रवृत्त होंगे ।

कप्तान बी तिवारी
सचिव

**अनुसूची**
**नव मंगलूर पत्तन न्यास**

**नव मंगलूर पत्तन न्यास कर्मचारी (भर्ती, वरिष्ठता व पदोन्नति) संशोधन विनियम 2012**

महा पत्तन न्यास अधिनियम 1963 (1963 का 38) की धारा 28 द्वारा प्रदत्त शक्तियों का प्रयोग करते हुए, नव मंगलूर पत्तन न्यास का न्यासी मंडल, नव मंगलूर पत्तन न्यास कर्मचारी (भर्ती, वरिष्ठता तथा पदोन्नति) विनियम 1980, जो समय-समय पर संशोधित है, में फिर से संशोधन करते हुए निम्नलिखित विनियम बनाता है।

1. इन विनियमों को नव मंगलूर पत्तन न्यास कर्मचारी (भर्ती, वरिष्ठता तथा पदोन्नति) संशोधन विनियम, 2012 कहा जाएगा ।

2. वर्तमान के नव मंगलूर पत्तन न्यास कर्मचारी (भर्ती, वरीयता एवं पदोन्नति) विनियम 1980, जो समय समय पर संशोधित है, में वर्तमान अनुसूची 12(सी) रद्द करके नई अनुसूची 12(डी) करके प्रतिस्थापित किया जाय ।

| क्र सं० | पद का नाम | पदों की संख्या | वर्गीकरण | वेतनमान (रू) | क्या पद प्रवरण का है या गैर प्रवरण | सीधी भर्ती के लिए उच्च आयु सीमा (वर्षों में) | सीधी भर्ती के लिए निर्धारित शैक्षिक तथा अन्य योग्यताएँ | क्या सीधी भर्ती के लिए निर्धारित (क) आयु (ख) शैक्षिक योग्यताएँ (ग) अनुभव पदोन्नति / आमेलन / प्रतिनियुक्ति के मामले में लागू होंगी । | परिवीक्षा की अवधि (वर्षों में) | भर्ती की विधि (क्या सीधी भर्ती द्वारा अथवा पदोन्नति /आमेलन / प्रतिनियुक्ति द्वारा) | पदोन्नति /आमेलन / प्रतिनियुक्ति के मामले में संवर्ग जिनमें से किया जाना होगा | टिप्पणी |
|---|---|---|---|---|---|---|---|---|---|---|---|---|
| 1. | 2. | 3. | 4. | 5. | 6. | 7. | 8. | 9. | 10. | 11. | 12. | 13. |
| 12 (डी) | सहायक संपदा अधिकारी | 1 | श्रेणी - II | 16400 - 40500 | चयन | 40 वर्ष | अनिवार्य : (i) राजस्व संग्रहण, भू- सर्वेक्षण, पट्टे पर ज़मीन देना आदि की देखरेख के कार्य में पर्यवेक्षकीय हैसियत से 5वर्ष अनुभव सहित सिविल इंजीनियरी में मान्यता प्राप्त विश्वविद्यालय से उपाधि या डिप्लोमा । वांछनीय : विधि में उपाधि । | (क) आयु : नहीं (ख) अर्हता : जी हाँ । (ग) अनुभव : नहीं, लेकिन पर्यवेक्षकीय हैसियत से 5 वर्ष का अनुभव होना चाहिए । | 2 वर्ष | (i) पदोन्नति द्वारा, ऐसा न होने पर अंतरण द्वारा। दोनों तरीके से न होने पर सीधी भर्ती द्वारा । | पदोन्नति : अपने ग्रेड में 3 वर्ष नियमित सेवा रखनेवाले संपदा अधीक्षक से पदोन्नति , ऐसा न होने पर स अ (सि)/ सहायक सचिव / स ले अ से अंतरण द्वारा । | शून्य |

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂ: ಆರ್‌ಡಿ 922 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ : 24–01–2012.**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ 3–6–2010ರ ದಿನಾಂಕದ ಎಲ್‌ಎನ್‌ಡಿ(ಎಸ್) ಸಿಆರ್ 196/2009–10ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಬಿ ಖರಾಬು ಹಳ್ಳದ ಜಮೀನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಬೆಂಗಳೂರು ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸರ್ಕಾರಿ ಬಿ ಖರಾಬು ಹಳ್ಳದ ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ರೂಪೇನ ಅಗ್ರಹಾರ |
| ತಾಲ್ಲೂಕು | ಬೆಂಗಳೂರು ದಕ್ಷಿಣ |
| ಜಿಲ್ಲೆ | ಬೆಂಗಳೂರು |
| ಸದರಿ ಭಾಗದ ವರ್ಣನೆ | ಸರ್ಕಾರಿ ಬಿ ಖರಾಬು ಹಳ್ಳ |
| ಸರಿ ಸುಮಾರು ವಿಸ್ತೀರ್ಣ | 0–08.08 ಗುಂಟೆ (ಸ.ನಂ. 27/3) |
| ಮೇರೆಗಳು | ಪೂರ್ವಕ್ಕೆ : ಸ.ನಂ. 27/3ರ ಉಳಿಕೆ ಜಮೀನು<br>ಪಶ್ಚಿಮಕ್ಕೆ : 27/3ರ ಉಳಿಕೆ ಜಮೀನು<br>ಉತ್ತರಕ್ಕೆ : ಸನಂ. 26ರ ಜಮೀನು<br>ದಕ್ಷಿಣಕ್ಕೆ : ರಿಂಗ್ ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ).

**ಪಿ.ಆರ್. 172**

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂ: ಇಎಕ್ಸ್‌ಇ:ಸಿಆರ್‌ಎಂ:1:1997–98, ದಿನಾಂಕ : 29–9–2011**

ಉಪಸ್ಥಿತರು : **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| <u>ಫಿರ್ಯಾದುದಾರರು</u> | <u>ವಿರುದ್ಧ</u> | | <u>ಆರೋಪಿ</u> |
|---|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಸಂಚಾರಿದಳ, ವಿರಾಜಪೇಟೆ | | 1) | ಶ್ರೀ ಟಿ.ಪಿ. ಲಿಂಗರಾಜು,<br>ನೌಕರ, ಭಾರತ್ ವೈನ್ಸ್, ಸಿ.ಎಲ್–2,<br>ಸನ್ನದುದಾರರು, ವಿರಾಜಪೇಟೆ |
| | | 2) | ಶ್ರೀ ಕೆ.ಬಿ. ಶಾಂತಪ್ಪ, ಸಿ.ಎಲ್–2,<br>ಸನ್ನದುದಾರರು, ಖಾಸಗಿ ಬಸ್ ನಿಲ್ದಾಣ<br>ವಿರಾಜಪೇಟೆ ಟೌನ್. |

**ಪ್ರಕರಣದ ಮುಖ್ಯಾಂಶಗಳು:–**

ದಿ: 18–5–05 ರಂದು ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚರನ್ನು ಕರೆದುಕೊಂಡು ಖಾಸಗಿ ಬಸ್ ನಿಲ್ದಾಣದ ಸಮೀಪದಲ್ಲಿ ಚಾಲ್ತಿಯಲ್ಲಿರುವ ಶ್ರೀ ಕೆ.ಬಿ. ಶಾಂತಪ್ಪ, ಸಿ.ಎಲ್–2, ಸನ್ನದುದಾರರು, ಇವರ ಸನ್ನದು ಮಳಿಗೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಮದ್ಯದ ಅಂಗಡಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ವ್ಯಕ್ತಿಯಾದ ಶ್ರೀ ಟಿ.ಪಿ. ಲಿಂಗರಾಜು (ಅಧಿಕೃತ ನೌಕರ), ಎಂಬುವವರು ಹಾಜರಿದ್ದು, ಅಧಿಕಾರಿಗಳು ಬಂದ ವಿಷಯವನ್ನು ತಿಳಿಸಿ ಸನ್ನದನ್ನು ತನಿಖೆ ನಡೆಸಲಾಗಿ ಸನ್ನದಿನಲ್ಲಿ ಎರಡು ರೂಮ್‌ಗಳು ಇದ್ದು, ಸನ್ನದಿನ 2ನೇ ರೂಮ್‌ನ ಒಂದು ಮೂಲೆಯಲ್ಲಿ ಕಾರ್ಡ್‌ಬೋರ್ಡ್ ಪೆಟ್ಟಿಗೆಗಳಿದ್ದು, ಅವುಗಳ ಒಳಗೆ ನೋಡಲಾಗಿ 8 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 384 ಮೆಕ್‌ಡೋವೆಲ್ ಬ್ರಾಂದಿ ಹಾಗೂ 6 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 288 ಓಲ್ಡ್‌ಮಂಕ್ ರಂ ಹಾಗೂ 4 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 192 ಒರಿಜಿನಲ್ ಚಾಯ್ಸ್ ವಿಸ್ಕಿ ಬಾಟಲಿಗಳಿದ್ದು ಒಟ್ಟು 864 ಮದ್ಯದ ಬಾಟಲಿಗಳಿರುತ್ತವೆ. ನಂತರ ಇವುಗಳನ್ನು ಹೊಂದಿರಲು ರಹದಾರಿ ಇದೆಯೇ ಎಂದು ಕೇಳಲಾಗಿ ಇಲ್ಲವೆಂದು ತಿಳಿಸಿದರು. ಇವುಗಳ ಒಟ್ಟು ಲಿ. 155.520 ಆಗಿದ್ದು ನಂತರ ಇವುಗಳಿಂದ ರಾಸಾಯನಿಕ ಪರೀಕ್ಷೆಗೆ 8x180 ಮಿಲಿ ಮೆಕ್‌ಡೋವೆಲ್ ಬ್ರಾಂದಿ, 6x180 ಮಿಲಿ ಓಲ್ಡ್‌ಮಂಕ್ ರಂ, 4x180 ಮಿಲಿ ಒರಿಜಿನಲ್ ಚಾಯ್ಸ್ ವಿಸ್ಕಿಗಳನ್ನು ಮಾದರಿ ತೆಗೆದುಕೊಂಡು ಉಳಿದ ಮದ್ಯವನ್ನು ರಟ್ಟಿನ ಪೆಟ್ಟಿಗೆಗಳಲ್ಲಿ ಇಟ್ಟು ದಾರದಿಂದ ಕಟ್ಟಿ ಇಲಾಖಾ ಸೀಲು ಮಾಡಲಾಯಿತು ಹಾಗೂ ಮೂರು ಬಗೆಯ ಮಾದರಿ ಸೀಸೆಗಳಿಗೂ ಸಹ ಬಟ್ಟೆ ಸುತ್ತಿ ಸೀಲು ಮಾಡಲಾಯಿತು.

ಪಂಚರಿಗೆ ಇವುಗಳನ್ನು ತೋರಿಸಲಾಗಿ ಇವುಗಳು ನಕಲಿ ಮದ್ಯವೆಂದು ತಿಳಿಸಿರುತ್ತಾರೆ. ಸನ್ನದಿನ ಅಧಿಕೃತ ನೌಕರನಾದ ಶ್ರೀ ಟಿ.ಪಿ. ಲಿಂಗರಾಜು ಬಿನ್ ಪೂವಯ್ಯ c/o ಶ್ರೀ ಕೆ.ಬಿ. ಶಾಂತಪ್ಪ, ಸಿ.ಎಲ್–2, ಸನ್ನದುದಾರರು, ವಿರಾಜಪೇಟೆ ಎಂದು ತಿಳಿಸಿದರು. ಪಂಚರ ಸಹಿ ಹಾಗೂ ಆರೋಪಿಗಳ ವಿಳಾಸ ಇರುವ ಚೀಟಿ ಬರೆದು ಮಾದರಿ ಸೀಸೆಗಳು ಹಾಗೂ ರಟ್ಟಿನ ಪೆಟ್ಟಿಗೆಗಳ ಮೇಲೆ ಅಂಟಿಸಲಾಯಿತು. ರಹದಾರಿ ಇಲ್ಲದೆ ನಕಲಿ ಮದ್ಯ ಹೊಂದಿರುವುದು ಅಬಕಾರಿ ಕಾನೂನಿಗೆ ವಿರೋಧವಾಗಿರುವುದರಿಂದ ಸನ್ನದಿನ ಆವರಣದಲ್ಲಿದ್ದ ಒಟ್ಟು ದಾಸ್ತಾನು ಸ್ವದೇಶಿ ಮದ್ಯ 620.230 ಲೀ. ಮತ್ತು ಬೀರ್ 110 ಲೀ., ವೈನ್ 12.480 ಲೀ. ಮತ್ತು 4.200 ಲೀ. ವೋಡ್ಕಾ, 155.520 ತೆರಿಗೆ ರಹಿತ ನಕಲಿ ಮದ್ಯವನ್ನು ವಶಕ್ಕೆ ತೆಗೆದುಕೊಂಡು ಮೇಲಿನ ಎಲ್ಲಾ ನ್ಯೂನತೆಗಳು ಅಬಕಾರಿ ಕಾನೂನಿಗೆ ವಿರೋಧವಾಗಿರುವುದರಿಂದ ಸನ್ನದಿನ ಅನಧಿಕೃತ ನೌಕರನನ್ನು ದಸ್ತಗಿರಿ ಮಾಡಿ ಅಬಕಾರಿ ಕಾಯ್ದೆ ನಿಯಮ 13, 14 ರಂತೆ ಅಪರಾಧವಾದ್ದರಿಂದ ಕಲಂ 34 ಹಾಗೂ 36 ರಡಿಯಲ್ಲಿ ಮೊಕದ್ದಮೆ ದಾಖಲಿಸಿ ಅಬಕಾರಿ ಕಾಯ್ದೆ ಕಲಂ 43 ರಲ್ಲಿ ಸದರಿ ಸನ್ನದು ಅಂಗಡಿಯಲ್ಲಿದ್ದ ಎಲ್ಲಾ ಮದ್ಯದ ದಾಸ್ತಾನನ್ನು ವಶಕ್ಕೆ ತೆಗೆದುಕೊಂಡು ನೌಕರ ಮತ್ತು ಸನ್ನದುದಾರರ ವಿರುದ್ಧ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರ ಪ್ರಕರಣ ಸಂ: 23/04–05, ದಿನಾಂಕ 18–5–05 ರಂತೆ ಪ್ರಕರಣ ದಾಖಲಿಸಿಕೊಂಡು ಮುಂದಿನ ಕ್ರಮದ ಬಗ್ಗೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು–1, ಜಾರಿ ಮತ್ತು ತನಿಖೆ, ವಿರಾಜಪೇಟೆ ಇವರು ಸದರಿ ಜಫ್ತು ಪಡಿಸಲಾದ ಮದ್ಯದಿಂದ ಮಾದರಿಯನ್ನು ಪ್ರತಿ 6 ರಟ್ಟಿನ ಪೆಟ್ಟಿಗೆಗಳಿಂದ 180 ಮಿಲಿಯಷ್ಟು ಮಾದರಿ ತೆಗೆದು ಮುಖ್ಯ ರಾಸಾಯನಿಕ ಪರೀಕ್ಷಕರು, ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇಲ್ಲಿಗೆ ದಿನಾಂಕ 15–6–2005 ರಂದು ಕಳುಹಿಸಲಾಗಿದ್ದು ಮುಖ್ಯ ರಾಸಾಯನಿಕ ತಜ್ಞರು ಪರಿಶೀಲಿಸಿ, ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ಸಂಚಾರಿ ದಳ ಇವರು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಿರುವ ಮದ್ಯದ ಪೈಕಿ ಕ್ರಮ ಸಂಖ್ಯೆ 1 ರಿಂದ 96, 99, 101 ರ ವರೆಗಿನ ಮದ್ಯವು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಮತ್ತು ಕ್ರಮ ಸಂಖ್ಯೆ 97, 98, 100, 102 ರಿಂದ 106 ರ ವರೆಗಿನ ಮದ್ಯದಲ್ಲಿ ಇದು ಭಾರತೀಯ ತಯಾರಿಕಾ ಮದ್ಯ ಹೊಂದಿರಬೇಕಾದ ಗುಣಮಟ್ಟವನ್ನು ಹೊಂದಿಲ್ಲವಾಗಿಯೂ ಹಾಗೂ ಅನುಗುಣವಾಗಿರುವುದಿಲ್ಲವಾಗಿ ಮತ್ತು ಸದರಿ ಮದ್ಯವು ನಕಲಿ ಮದ್ಯವಾಗಿರುತ್ತದೆ ಎಂದು ಮುಖ್ಯ ರಾಸಾಯನಿಕ ತಜ್ಞರು, ಬೆಂಗಳೂರು ಇವರ ಪತ್ರ ಸಂ : ಸಿಸಿಎಲ್ : 3716 : 2005, ದಿನಾಂಕ 17.6.2005 ರಲ್ಲಿ ದೃಢೀಕರಿಸಿರುತ್ತಾರೆ.

ನಂತರ ಸನ್ನದು ನವೀಕರಣ ಸಮಯವಾದ್ದರಿಂದ ದಿನಾಂಕ 25–6–05 ರಂದು ಮಾನ್ಯ ಅಬಕಾರಿ ಆಯುಕ್ತರ ಪೂರ್ವಾನುಮತಿಗಾಗಿ ಕೋರಲಾಗಿತ್ತು. ಮಾನ್ಯ ಅಬಕಾರಿ ಆಯುಕ್ತರವರ ದಿನಾಂಕ 28–6–05 ರ ಪತ್ರದಲ್ಲಿ ನಿಯಮ 5 ಎ ಪ್ರಕಾರ ನವೀಕರಣ ಅಧಿಕಾರವು ಜಿಲ್ಲಾಧಿಕಾರಿಗಳಿಗೆ ಇರುವುದರಿಂದ ಅದರಂತೆ ನಿರ್ಧಾರ ತೆಗೆದುಕೊಳ್ಳಲು ಸೂಚಿಸಲಾಗಿತ್ತು. ಸದರಿ ಸೂಚನೆಯನ್ವಯ ಸನ್ನದುಗಳನ್ನು ನವೀಕರಿಸುತ್ತಾ ಬರಲಾಗಿರುತ್ತದೆ.

ತದನಂತರ ದಿನಾಂಕ 1–3–06 ರಂದು ನಿಯಮ 43(ಬಿ) ರನ್ವಯ ಸನ್ನದುದಾರರಿಗೆ ಕಾರಣ ಕೇಳಿ ನೋಟಿಸ್ ನೀಡಿ ಸಿಎಲ್–2 ಅಂಗಡಿಯಲ್ಲಿ ದಿನಾಂಕ 18–5–05 ರಂದು 155.520 ಲೀ. ನಕಲಿ ಮದ್ಯವನ್ನು ದಾಸ್ತಾನು ಮಾಡಿ ನಿಯಮ ಬಾಹಿರ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ನಿಮ್ಮ ಮೇಲೆ ದಾಖಲಾಗಿರುವ ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾದ ತೆರಿಗೆ ಪಾವತಿ ಮಾಡಿದ ಮತ್ತು ತೆರಿಗೆ ಪಾವತಿ ಮಾಡದೇ ಇರುವ ಪೂರ್ಣ ಮದ್ಯದ ಸರಕನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ವಿವರಣೆ ನೀಡುವಂತೆ ಸೂಚಿಸಲಾಗಿತ್ತು. ದಿನಾಂಕ 1–3–06ರ ಕಾರಣ ಕೇಳಿ ನೋಟಿಸಿಗೆ ಸನ್ನದುದಾರರು ದಿನಾಂಕ 17–3–06 ರಂದು ಲಿಖಿತ ಉತ್ತರ ನೀಡಿ ವಕೀಲರ ಮೂಲಕ ನಡೆಸಲು ಅವಕಾಶ ಕಲ್ಪಿಸಿಕೊಡಲು ವಿನಂತಿಸಿರುತ್ತಾರೆ.

ಸನ್ನದುದಾರರ ದಿನಾಂಕ 18–7–05 ರ ಕೋರಿಕೆಯ ಅನ್ವಯ ಸದರಿ ಮದ್ಯಕ್ಕೆ ಅಂದರೆ 619.590 ಲೀ. ಸ್ವದೇಶಿ ಮದ್ಯ, 110.130 ಲೀ. ಬೀರ್, 12.450 ಲೀ. ವೈನ್, 4,200 ಲೀ. ವೋಡ್ಕಾವನ್ನು ಕೆ.ಎಸ್.ಬಿ.ಸಿ.ಎಲ್. ನಿಂದ ಚಾಲ್ತಿಯಲ್ಲಿರುವ ಪ್ರಚಲಿತ ಮೂಲ ಬೆಲೆ ರೂ. 38,781, ಅಬಕಾರಿ ಸುಂಕ ರೂ. 28,931, ಹೆಚ್ಚುವರಿ ಅಬಕಾರಿ ಸುಂಕ ರೂ. 38,834, ಒಟ್ಟು ರೂ.1,06,546 (ಒಂದು ಲಕ್ಷದ ಆರು ಸಾವಿರದ ಐದುನೂರ ನಲವತ್ತಾರು)ಗಳನ್ನು ನಿಗದಿಪಡಿಸಲಾಗಿದ್ದು, ಇದಕ್ಕೆ ಸಮನಾದ ಭದ್ರತೆಯನ್ನು ಕೆನರಾ ಬ್ಯಾಂಕ್, ವಿರಾಜಪೇಟೆ ಶಾಖೆ, ಇಲ್ಲಿಂದ ಬ್ಯಾಂಕ್ ಗ್ಯಾರೆಂಟಿ ರೂಪದಲ್ಲಿ ಪಡೆದುಕೊಂಡು ಅಂತಿಮ ಆದೇಶವನ್ನು ಕಾಯ್ದಿರಿಸಿ ಮದ್ಯವನ್ನು ಸನ್ನದುದಾರರ ವಶಕ್ಕೆ ಆದೇಶ

9. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ನಾರಾಯಣ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್. 1046**

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ನಂ: ಎಸ್‌ಡಿಕೆ/141/ಡಿಟಿಸಿಆರ್/2009-10, ದಿನಾಂಕ: 05-01-2012**

**ಉಪಸ್ಥಿತರು: ಬಿ.ವಿ ಹೂವಪ್ಪ ಗೌಡ,** ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು :** | **ಅರೋಪಿ /ವಾಹನದ ಮಾಲೀಕ** |
|---|---|
| ಅಬಕಾರಿ ಉಪ ನಿರೀಕ್ಷಕರು (1) ಪುತ್ತೂರು ವಲಯ,<br>ಪುತ್ತೂರು | ಚಂದ್ರಹಾಸ.ಬಿ, ಬಿನ್: ಮೋನಪ್ಪ ಪೂಜಾರಿ<br>ಬೆದ್ರಾಡಿ ಹೌಸ್, ಕರ್ನೂರು ಅಂಚೆ,<br>ನೆಟ್ಟಣಿಗೆ ಮುಡ್ನೂರು ಗ್ರಾಮ, ಪುತ್ತೂರು ತಾಲೂಕು |

**ಪ್ರಕರಣದ ಮುಖ್ಯಾಂಶಗಳು :**

ಅಬಕಾರಿ ಉಪ ನಿರೀಕ್ಷಕರು(1), ಪುತ್ತೂರು ವಲಯರವರು ಖಚಿತ ವರ್ತಮಾನದ ಮೇರೆಗೆ ದಿನಾಂಕ:27-12-2009 ರಂದು ಬೆಳಿಗ್ಗೆ 8-00 ಗಂಟೆ ಸಮಯಕ್ಕೆ ಪುತ್ತೂರು ತಾಲೂಕು ನೆಟ್ಟಣಿಗೆ ಮುಡ್ನೂರು ಗ್ರಾಮದ ಕರ್ನೂರು ಗಾಳಿ ಮುಖ ಎಂಬಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಕರ್ನೂರು ಕಡೆಯಿಂದ ಗಾಳಿಮುಖ ಕಡೆಗೆ ವಾಹನ ಸಂ: KA-19-M-8380 ಮಾರುತಿ ಒಮಿನಿ ಕಾರು ಬರುತ್ತಿರುವುದನ್ನು ಕಂಡು ತಪಾಸಣೆಗಾಗಿ ಅದನ್ನು ತಡೆದು ನಿಲ್ಲಿಸಿ ವಾಹನವನ್ನು ಶೋಧನೆ ಮಾಡುವರೇ ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಶೋಧನೆ ಮೆಮೋ ತಯಾರಿಸಿ ವಾಹನವನ್ನು ಪರಿಶೀಲಿಸಿದಾಗ ಕಾರಿನ ಒಳಗಡೆ ಎರಡು ಪ್ಲಾಸ್ಟಿಕ್ ಗೋಣಿಚೀಲಗಳು ಇದ್ದು ಅದರಲ್ಲಿ 180 ಎಂಎಲ್ ನ ತಲಾ 60 ಬಾಟಲಿಗಳಂತೆ ಒಟ್ಟು 120 ಬಾಟಲಿಗಳಲ್ಲಿ ಶಾಟ್ ವಿಸ್ಕಿ ಎಂಬ ಮದ್ಯದ ಬಾಟಲಿಗಳು ಇರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 11 ಮತ್ತು 14ರ ಪ್ರಕಾರ ಅಪರಾಧ ಹಾಗೂ 32 ಮತ್ತು 38 ಎ ರೀತ್ಯಾ ಶಿಕ್ಷಾರ್ಹವಾಗಿ ರುವುದರಿಂದ, ಸದ್ರಿ ವಾಹನ ಹಾಗೂ ಮದ್ಯವನ್ನು ಜಪ್ತು ಪಡಿಸಿಕೊಂಡು, ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಪ್ರತ್ಯೇಕಿಸಿ ಮಹಜರು ಕ್ರಮ ಜರುಗಿಸಿ ಅರೋಪಿತನಾದ ಚಂದ್ರಹಾಸ.ಬಿ, ಬಿನ್:ಮೋನಪ್ಪ ಪೂಜಾರಿ, ಬೆದ್ರೋಡಿ ಮನೆ, ಕರ್ನೂರು ಅಂಚೆ, ನೆಟ್ಟಣಿಗೆ ಮುಡ್ನೂರು ಗ್ರಾಮ, ಪುತ್ತೂರು ತಾಲೂಕು ಇವರ ವಿರುದ್ದ ಕ್ರೈಂ ಸಂ:5/09-10,ದಿ:27-12-2009ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡಿರುತ್ತಾರೆ.

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:-**

1) ಬಿಳಿ ಬಣ್ಣದ ಮಾರುತಿ ಒಮ್ನಿ ಕಾರು ಸಂ:KA-19-M-8380
2) ಎರಡು ಪ್ಲಾಸ್ಟಿಕ್ ಗೋಣಿ ಚೀಲಗಳಲ್ಲಿ ಶಾಟ್ ವಿಸ್ಕಿ ಎಂಬ ಲೇಬಲ್ ಇರುವ 180 ಎಂಎಲ್‌ನ ತಲಾ 60ರಂತೆ 120 ಬಾಟಲಿಗಳಲ್ಲಿ – 21.600 ಲೀ ಮದ್ಯ

(180ಎಂಎಲ್ 30 ಬಾಟಲಿಗಳನ್ನು ರಸಾಯನಿಕ ಪರೀಕ್ಷಕೆಗಾಗಿ ಮಾದರಿ ತೆಗೆಯಲಾಗಿದೆ )

ಜಪ್ತಾದ ವಾಹನ ಮಾರುತಿ ಒಮ್ನಿ ಕಾರು ಸಂ: KA-19-M-8380 ಇದರ ಮಾಲೀಕರೆಂದು ಹೇಳಿಕೊಂಡ ಶ್ರೀ. ಚಂದ್ರಹಾಸ ಬಿ, ಬಿನ್:ಮೋನಪ್ಪ ಪೂಜಾರಿ, ಬೆದ್ರಾಡಿ ಹೌಸ್, ಕರ್ನೂರು ಅಂಚೆ, ನೆಟ್ಟಣಿಗೆ ಮುಡ್ನೂರು ಗ್ರಾಮ, ಪುತ್ತೂರು ತಾಲೂಕು ಇವರು ತಮ್ಮ ವಕೀಲರ ಮೂಲಕ ದಿ:4-01-2010ರಂದು ಅರ್ಜಿ ಸಲ್ಲಿಸಿ, ವಾಹನದ ಮದ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರ ಅರ್ಜಿಯ ವಿಚಾರಣೆ ಕೈಗೊಂಡು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ ಜಿಲ್ಲೆ, ಮಂಗಳೂರು ಇವರ ಪ್ರಾಧಿಕಾರದಿಂದ ದಿ:27-5-2010 ರಂದು ಹೊರಡಿಸಿದ ಮದ್ಯಂತರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ಪುರಸ್ಕರಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನಕ್ಕೆ ನಿಗಧಿಪಡಿಸಿರುವ ಮೊತ್ತಕ್ಕೆ ಸಮಾನವಾದ ರೂ.50,000/- ಬ್ಯಾಂಕ್ ಗ್ಯಾರೆಂಟಿಯನ್ನು ಭದ್ರತೆಯಾಗಿ ಒದಗಿಸುವ ಹಾಗೂ ಇತರೆ ಷರತ್ತುಗಳ ಮೇಲೆ ವಾಹನವನ್ನು ಮಾಲೀಕರ ಸುಪರ್ಧಿಗೆ ಬಿಡುಗಡೆಗೊಳಿಸಲು ಆದೇಶಿಸಲಾಗಿರುತ್ತದೆ. ಸದ್ರಿ ಅದೇಶದಂತೆ ವಾಹನದ ಮಾಲೀಕರು ರೂ. 50,000/- ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ವಿಜಯ ಬ್ಯಾಂಕ್, ಈಶ್ವರ ಮಂಗಲ ಶಾಖೆ, ಪುತ್ತೂರು ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿರುವ ಮೇರೆಗೆ ವಾಹನವನ್ನು ದಿ:01-06-2010ರಂದು ವಾಹನದ ಮಾಲೀಕರಿಗೆ ಬಿಡುಗಡೆಗೊಳಿಸಲಾಗಿರುತ್ತದೆ. ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:4-5-2012ರವರೆಗೆ ಊರ್ಜಿತದಲ್ಲಿರುತ್ತದೆ.

ತನಿಖಾಧಿಕಾರಿಗಳು ಪ್ರಕರಣದ ತನಿಖೆ ಕೈಗೊಂಡು ಜಪ್ತಾದ ವಾಹನ ಮಾರುತಿ ಓಮ್ನಿ ಕಾರು ಸಂ:KA–19–M–8380 ಇದರ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಸ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ ಮಂಗಳೂರು ಇವರಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಶ್ರೀ.ಚಂದ್ರಹಾಸ ಬಿ, ಬಿನ್:ಮೋನಪ್ಪ ಪೂಜಾರಿ, ಡೋರ್ ನಂ:4–15, ನೆಟ್ಟಣಿಗೆ ಮುಡ್ನೂರು ಗ್ರಾಮ, ಪುತ್ತೂರು ತಾಲೂಕು ಇವರು ದಿ:25–2–2008ರಿಂದ ಅನ್ವಯವಾಗುವಂತೆ ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ದೃಡಪಟ್ಟಿರುವ ಮೇರೆಗೆ ಪ್ರಕರಣದ ಅರೋಪಿತ/ವಾಹನದ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿ:01–03–2010 ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ರ ಪ್ರಕಾರ ಕಾರಣ ಕೇಳಿ ನೋಟಿಸು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರಿಗೆ ದಿ:4–3–2010ರಂದು ಜ್ಯಾರಿಯಾಗಿದ್ದು, ವಾಹನದ ಮಾಲೀಕರು ದಿ:06–03–2010ರಂದು ಉತ್ತರಿಸುತ್ತಾ, ಪ್ರಕರಣದ ಅರೋಪವನ್ನು ಅಲ್ಲಗಳೆದು ವಾಹನ ತನ್ನ ವೈಯಕ್ತಿಕ ಉಪಯೋಗಕ್ಕೆ ಅಗತ್ಯವಾಗಿರುವುದರಿಂದ ಪ್ರಕರಣವನ್ನು ಮುಕ್ತಾಯಗೊಳಿಸಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳದೇ ಶಾಶ್ವತವಾಗಿ ಬಿಡುಗಡೆಗೊಳಿಸಲು ಮನವಿ ಒಪ್ಪಿಸಿರುತ್ತಾರೆ.

ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ಕರ್ನಾಟಕ ಸರ್ಕಾರದ ರಾಸಾಯನಿಕ ವಿಶ್ಲೇಷಕರು,ಮಂಗಳೂರು ಇವರಿಂದ ಪಡೆದ ರಾ.ವಿ ಸಂ:ಇಎಕ್ಸ್‌ಇ–407–30, ದಿ:30–12–2009ರ ಪ್ರತಿಯನ್ನು ಪ್ರಕರಣದ ತನಿಖಾದಿಕಾರಿಗಳು ತನಿಖಾ ವರದಿ ಸಂ: ಪುತ್ತೂರು ವಲಯ ಕ್ರೈಂ ಸಂ: 17/2009–2010 ದಿ:11–2–2010ರಂತೆ ವರದಿ ಒಪ್ಪಿಸಿ ಜಪ್ತುಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವುದರಿಂದ ಹಾಗೂ ಮಾದರಿ ವಿಶ್ಲೇಷಣಾ ವರದಿಯಲ್ಲಿ ಮದ್ಯದ ಮಾದರಿಗಳಲ್ಲಿ ಮದ್ಯಸಾರದ ಅಂಶವು 43.3 ಡಿಗ್ರಿ ಪತ್ತೆಯಾಗಿ ಮಾದರಿಗಳು ಭಾರತೀಯ ಮಾನಕ ಬುರ್‍ಯೋದ ಅಂಶಗಳಿಗೆ ಅನುಗುಣವಾಗಿರುವುದರಿಂದ ಸದ್ರಿ ಮದ್ಯವನ್ನು (ಮಾದರಿಗಳನ್ನು ಹೊರತು ಪಡಿಸಿ) ದಿ:29–5–2010ರಂದು ಹೊರಡಿಸಿದ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯವನ್ನು ಪ್ರಸ್ತುತ ಚಾಲ್ತಿಯಲ್ಲಿರುವ ಸರ್ಕಾರದ ಅದೇಶದಂತೆ ನಾಶಪಡಿಸಲು ಆದೇಶಿಸಲಾಗಿರುತ್ತದೆ. ಅದರಂತೆ ಮದ್ಯವನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ಸಮಕ್ಷಮದಲ್ಲಿ ದಿ:7–6–2010ರಂದು ನಾಶಪಡಿಸಲಾಗಿರುತ್ತದೆ.

ಅಬಕಾರಿ ಕಾಯಿದೆ ಕಲಂ 43 ಎ ರನ್ವಯ ಪ್ರಾದಿಕಾರದ ನ್ಯಾಯಾಲಯದಲ್ಲಿ ಪ್ರಕರಣದ ವಿಚಾರಣೆಯನ್ನು ಪ್ರಾರಂಬಿಸಿ ಅಭಿಯೋಗದ ಪರ ಇಬ್ಬರು ಸಾಕ್ಷಿದಾರರುಗಳನ್ನು ವಿಚಾರಣೆಗೆ ಒಳಪಡಿಸಿ ನಿಶಾನೆ ಪಿ–1 ರಿಂದ 5ಎ ರವರೆಗೆ ಗುರುತಿಸಿಕೊಳ್ಳಲಾಗಿರುತ್ತದೆ. ಹಾಗೂ ರಕ್ಷಣಾ ಪರ ವಾಹನದ ಮಾಲೀಕರಾದ ಶ್ರೀ.ಚಂದ್ರಹಾಸ, ಬಿನ್:ಮೋನಪ್ಪ ಪೂಜಾರಿ, ಬೆದ್ರಾಡಿ ಹೌಸ್, ನೆಟ್ಟಣಿಗೆ ಮುಡ್ನೂರು ,ಕರ್ನೂರು ಅಂಚೆ, ಪುತ್ತೂರು ಇವರನ್ನು ಡಿಡಬ್ಲ್ಯೂ–1 ರನ್ನಾಗಿ ವಿಚಾರಣೆ ನಡೆಸಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ: 27–12–2009ರಂದು ಮಾರುತಿ ಓಮ್ನಿ ಕಾರು ಸಂ:KA–19–M–8380 ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ದಿನಾಂಕ:27–12–2009ರಂದು ಮಾರುತಿ ಓಮ್ನಿ ಕಾರು ಸಂ:KA–19–M–8380 ಇದರಲ್ಲಿ ಸಾಗಾಣಿಕೆಯಾದ ಸೊತ್ತು ಮದ್ಯ ಎಂಬ ಬಗ್ಗೆ ರಸಾಯನಿಕ ವಿಶ್ಲೇಷಣಾ ವರದಿಯಿಂದ ದೃಡೀಕೃತವಾಗಿದೆಯೇ?

3) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯಗಳ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

4) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಮತ್ತು ಎರಡನೇ ಅಂಶವನ್ನು ಗುಣಾತ್ಮಕವಾಗಿ,ಮೂರನೇ ಅಂಶವನ್ನು ನಕರಾತ್ಮಕವಾಗಿ ಮತ್ತು ನಾಲ್ಕನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1 :–**

ಪ್ರಕರಣದ ಪಿರ್ಯಾದುದಾರರಾದ ಶ್ರೀ.ಯಾಕೂಬ್ ಖಾನ್, ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ವಲಯ ಇವರು ದಿ:19–10–2010ರಂದು ಪ್ರಾದಿಕಾರದ ಮುಂದೆ ಸಾಕ್ಷಿ ನೀಡುತ್ತಾ, ದಿನಾಂಕ:27–12–2009ರಂದು ಪುತ್ತೂರು ತಾಲೂಕು ನೆಟ್ಟಣಿಗೆ ಮುಡ್ನೂರು ಗ್ರಾಮದ ಕರ್ನೂರು ಗಾಳಿಮುಖ ರಸ್ತೆಯಲ್ಲಿ ಕೇರಳಕ್ಕೆ ಅಕ್ರಮವಾಗಿ ಮದ್ಯ ಸಾಗಾಟ ನಡೆಯುತ್ತಿದೆ ಎಂಬ ಖಚಿತ ವರ್ತಮಾನದ ಮೇರೆಗೆ ಸಿಬ್ಬಂಧಿಗಳೊಂದಿಗೆ ಇಲಾಖಾ ವಾಹನ KA–19–G–357 ಇದರಲ್ಲಿ ಕರ್ನೂರು ಗಾಳಿಮುಖ ರಸ್ತೆಯಲ್ಲಿ ವಾಹನ ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ, ಮಾರುತಿ ಓಮ್ನಿ ಕಾರು ಸಂ:KA–19–M–8380ನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ವಾಹನ ಚಾಲಕನು ಅನುಮಾನಸ್ಪದ ರೀತಿಯಲ್ಲಿ ವರ್ತಿಸಿದ್ದನ್ನು ಗಮನಿಸಿ ವಾಹನದ ತಪಾಸಣೆ ಪೂರ್ವದಲ್ಲಿ ಮಾನ್ಯ ನ್ಯಾಯಾಧೀಶರಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಾಕಾಶವಿಲ್ಲದ ಕಾರಣ ಸಿಬ್ಬಂಧಿ ಸಮಕ್ಷಮ ರೆಕಾರ್ಡ್ ಆಫ್

ರಿಜೆನ್ಸ್ ಪಡೆದು ವಾಹನವನ್ನು ತಪಾಸಣೆ ನಡೆಸಲಾಯಿತು ಎಂದು, ತಪಾಸಣೆ ಸಂದರ್ಭದಲ್ಲಿ ವಾಹನದ ಸೀಟಿನ ಕಾಲಿಡುವ ಜಾಗದಲ್ಲಿ ಎರಡು ಬಿಳಿ ಬಣ್ಣದ ಪಾಲಿಥೀನ್ ಚೀಲಗಳಲ್ಲಿ 180 ಮಿಲಿ ಪ್ರಮಾಣದ ಒಟ್ಟು 120 ಬಾಟಲಿಗಳಲ್ಲಿ ಶಾರ್ಟ್ ವಿಸ್ಕಿ ಎಂಬ ಮದ್ಯ ಇರುವುದು ಪತ್ತೆಯಾಗಿ, ಸದ್ರಿ ಮದ್ಯ ಸಾಗಾಟದ ಬಗ್ಗೆ ಯಾವುದೇ ಪರವಾನಿಗೆ ಇಲ್ಲದೇ ಮದ್ಯವನ್ನು ಕೇರಳ ರಾಜ್ಯದ ಅಡೂರು ಎಂಬಲ್ಲಿಗೆ ಮಾರಾಟ ಮಾಡಲು ಸಾಗಾಟ ಮಾಡುತ್ತಿರುವುದಾಗಿ ವಾಹನದ ಚಾಲಕನು ತಿಳಿಸಲಾಗಿ ಇದು ಅಬಕಾರಿ ಕಾಯಿದೆಗೆ ವಿರುದ್ಧವಾಗಿರುವುದೆಂದು ಖಚಿತಗೊಂಡ ಮೇರೆಗೆ ಸದ್ರಿ ಪತ್ತೆಯಾದ ಮದ್ಯದ ಬಾಟಲಿ ಗಳಿಂದ 30 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ ಸೀಲು ಮಾಡಿ ಮಾದರಿ ಸೀಲನ್ನು ತಯಾರಿಸಲಾಯಿತು ಎಂದು, ಚಾಲಕನ ಹೆಸರು,ವಿಳಾಸ ಕೇಳಲಾಗಿ ಚಂದ್ರಹಾಸ ಬಿ. ಬಿನ್:ಮೋನಪ್ಪ ಪೂಜಾರಿ, ಪ್ರಾಯ:21ವರ್ಷ, ಬೆದ್ರಾಡಿ ಮನೆ, ಕರ್ನೂರು ಅಂಚೆ, ನೆಟ್ಟಣಿಗೆ ಮುಡ್ನೂರು ಗ್ರಾಮ,ಪುತ್ತೂರು ಎಂಬುದಾಗಿ ತಿಳಿಯಿತು ಎಂದು, ಈ ಬಗ್ಗೆ ಸ್ಥಳದಲ್ಲಿಯೇ ಸ್ಥಳ ಮಹಜರನ್ನು ತಯಾರಿಸಿ ಆರೋಪಿತನ ಹೆಸರು ವಿಳಾಸ ಇರುವ ಗುರುತು ಚೀಟಿಯನ್ನು ಬಾಟಲಿಗಳಿಗೆ ಅಂಟಿಸಲಾಯಿತು ಎಂದು, ಮಹಜರು ಸಂದರ್ಭದಲ್ಲಿ ಪಂಚರು ಯಾರೂ ಬರಲು ಒಪ್ಪದ ಇದ್ದ ಕಾರಣ ಇಲಾಖಾ ಸಿಬ್ಬಂಧಿ ಸಮಕ್ಷಮದಲ್ಲಿ ವಾಹನ ಮತ್ತು ಮದ್ಯದ ಬಾಟಲಿಗಳನ್ನು ಜಪ್ತುಪಡಿಸಿಕೊಂಡು ಆರೋಪಿಯೊಂದಿಗೆ ಕಛೇರಿಗೆ ಬಂದು ಆರೋಪಿತನ ವಿರುದ್ಧ ಪ್ರಕರಣ ದಾಖಲಿಸಿ ಪ್ರಥಮ ಮಾಹಿತಿ ವರದಿಯ ಮೂಲ ಪ್ರತಿಯನ್ನು ನ್ಯಾಯಾಲಯಕ್ಕೆ ಹಾಗೂ ಪ್ರತಿಗಳನ್ನು ಅಧಿಕೃತ ಅಧಿಕಾರಿಗಳಿಗೆ ಕಳುಹಿಸಿಕೊಟ್ಟಿರುವುದಾಗಿಯೂ, ಆರೋಪಿಯ ವಿರುದ್ಧ ದಸ್ತಗಿರಿ ಕ್ರಮ ಜರುಗಿಸಿ ಅತನನ್ನು ರಿಮಾಂಡ್ ವರದಿಯೊಂದಿಗೆ ಹಾಜರುಪಡಿಸಲಾಯಿತು ಎಂದು, ರಸಾಯನಿಕ ಪರೀಕ್ಷೆಗೆ ತೆಗೆಯಲಾದ ಮಾದರಿ 30 ಬಾಟಲಿಗಳನ್ನು ಅಬಕಾರಿ ರಕ್ಷಕರಾದ ವಿಶ್ವನಾಥ ಗೌಡ, ಇವರೊಂದಿಗೆ ಮಂಗಳೂರಿನ ರಸಾಯನ ವಿಶ್ಲೇಷಣಾ ಕಛೇರಿಗೆ ಕಳುಹಿಸಿಕೊಟ್ಟು ದಿ:10–2–2010ರಂದು ವಿಶ್ಲೇಷಣಾ ವರದಿ ಹಾಗೂ ಪರೀಕ್ಷಿಸಿದ ಮಾದರಿ ಬಾಟಲಿಗಳನ್ನು ಸ್ವೀಕರಿಸಲಾಯಿತು ಎಂದು, ವಶಪಡಿಸಿ ಕೊಂಡ ವಾಹನದ ಬಿ ವಹಿ ವರದಿಯನ್ನು ಪಡೆಯಲು ಸಾರಿಗೆ ಅಧಿಕಾರಿ, ಪುತ್ತೂರು ಇವರಿಗೆ ದಿ:6–1–2010ರಂದು ಪತ್ರ ಬರೆದು ಬಿ ವರದಿ ಪಡೆಯಲಾಯಿತು ಎಂದು, ಸದ್ರಿ ಬಿ ವರದಿ ಪ್ರಕಾರ ಆರೋಪಿಯೇ ವಾಹನದ ಮಾಲೀಕನಾಗಿರುತ್ತಾನೆ ಎಂದು, ಜಪ್ತು ಪಡಿಸಿಕೊಂಡ ಸೊತ್ತುಗಳನ್ನು ದಿ:11–2–2010ರಂದು ಹಾಗೂ ವಾಹನವನ್ನು ದಿ:01–02–2010ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಅಧಿಕೃತ ಅಧಿಕಾರಿಗಳಿಗೆ ಪತ್ರ ಬರೆದಿರುತ್ತೇನೆ ಎಂದು, ತನಿಖೆ ಮುಂದುವರಿಸಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32,34 ಮತ್ತು 38ಎ ಅಡಿ ಆರೋಪ ಸಾಭೀತಾಗಿರುವ ಕಾರಣ ಆರೋಪಿತನ ವಿರುದ್ಧ ಮಾನ್ಯ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳು ಇವರ ನ್ಯಾಯಾಲಯದಲ್ಲಿ ಆರೋಪಣಾ ಪಟ್ಟಿ ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನುಡಿದು ಮಹಜರನ್ನು ನಿಶಾನೆ ಪಿ–1 ಎಂದು ,ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ–1 ಎ ಎಂದು, ಪ್ರ.ವ.ವ ಯನ್ನು ನಿಶಾನೆ–ಪಿ–2 ,ಅದರ ಮೇಲಿನ ಸಹಿಯನ್ನು ನಿ.ಪಿ–2 ಎ ಎಂದು, ರಸಾಯನಿಕ ವಿಶ್ಲೇಷಣಾ ವರದಿಯನ್ನು ನಿ.ಪಿ.–3 ಎಂದು, ಅದರ ಮೇಲಿನ ದೃಡೀಕೃತ ಸಹಿಯನ್ನು ನಿ.ಪಿ.–3 ಎ ಎಂದು, ವಾಹನದ ಬಿ ವಹಿ ವರದಿಯನ್ನು ನಿ.ಪಿ.–4 ,ಅದರ ಮೇಲಿನ ಸ್ವೀಕರಣ ಸಹಿಯನ್ನು ನಿ.ಪಿ.–4 ಎ ಎಂದು , ದಿನಾಂಕ:11–2–2010ರ ತನಿಖಾ ವರದಿಯನ್ನು ನಿ.ಪಿ.–5, ಅದರ ಮೇಲಿನ ಸಹಿಯನ್ನು ನಿ.ಪಿ.–5ಎ ಎಂದು, ದಿ:1–2–2010ರ ತನಿಖಾ ವರದಿಯನ್ನು ನಿ.ಪಿ.–6 ಎಂದು, ಅದರ ಮೇಲಿನ ಸಹಿಯನ್ನು ನಿ.ಪಿ–6 ಎ ಎಂದು ಗುರುತಿಸಿ ಸಾಕ್ಷ್ಯ ನುಡಿದಿರುತ್ತಾರೆ.

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಸಾಧರಣ 25 ಕಿ.ಮೀಟರು ದೂರದಲ್ಲಿರುವ ತಕ್ಷೀರು ಸ್ಥಳಕ್ಕೆ ಬೆಳಿಗ್ಗೆ 6–00 ಗಂಟೆಗೆ ಸಿಬ್ಬಂಧಿಗಳ ಜೊತೆ ಹೋಗಿದ್ದು ಈ ಬಗ್ಗೆ ಕಛೇರಿ ದಾಖಲೆಗಳಲ್ಲಿ ನಮೂದಿಸಿರುತ್ತೇನೆ, ತಕ್ಷೀರು ಸ್ಥಳವಾದ ಕರ್ನೂರಿಗೆ ಬೇರೆ ದಾರಿಗಳಿದ್ದು ತಪಾಸಣೆಗೆ ನಿಂತ ದಾರಿ ಕಳ್ಳ ಸಾಗಾಣಿಕೆಗೆ ಪ್ರಮುಖವಾಗಿ ಬಳಸುವಂತಾಗಿದೆ, ತಮ್ಮ ವಾಹನವನ್ನು ಆ ದಿವಸ ಕರ್ನೂರು ಗಾಳಿಮುಖ ರಸ್ತೆಯಲ್ಲಿ ಗಾಳಿಮುಖಕ್ಕೆ ಮುಖ ಮಾಡಿ ನಿಲ್ಲಿಸಿರುತ್ತೇವೆ, ತಕ್ಷೀರಿನಲ್ಲಿ ನಮೂದಿಸಿದಂತೆ ಬೆಳಿಗ್ಗೆ 8–00 ಗಂಟೆಗೆ ವಾಹನ ಅಕ್ರಮ ಮದ್ಯದೊಂದಿಗೆ ಅಲ್ಲಿ ಬಂದಿತ್ತು, ತಪ್ಪಿಸಿಕೊಂಡು ಚಾಲಕ ವಾಹನವನ್ನು ಓಡಿಸಲು ಯತ್ನಿಸಿದಾಗ, ಆತನ ವಾಹನಕ್ಕೆ ಇಲಾಖಾ ವಾಹನವನ್ನು ಅಡ್ಡ ನಿಲ್ಲಿಸಲಾಯಿತು, ವಾಹನದ ಒಳಗಡೆ ಕಾಲಿಡುವ ಸ್ಥಳದಲ್ಲಿ 2 ಗೋಣಿ ಚೀಲ ಪತ್ತೆಯಾಗಿ ಸಿಬ್ಬಂಧಿಗಳು ಸದ್ರಿ 2 ಗೋಣಿ ಚೀಲಗಳನ್ನು ಹೊರಗೆ ತೆಗೆದಿರುತ್ತಾರೆ, ರಸಾಯನಿಕ ಪರೀಕ್ಷೆಗಾಗಿ 2 ಗೋಣಿ ಚೀಲಗಳಿಂದ ಎಲ್ಲಾ ಬಾಟಲಿಗಳನ್ನು ತೆಗೆದಿರುವುದಿಲ್ಲ, 2 ಗೋಣಿ ಚೀಲಗಳನ್ನು ಅಮಾನತ್ತುಪಡಿಸಿ ಕ್ರ.ಸಂ:1 ಮತ್ತು 2 ಎಂದು ನೀಡಲಾಗಿದ್ದು ಈ ವಿಷಯವನ್ನು ಮಹಜರಿನಲ್ಲಿ ನಮೂದಿಸಿಲ್ಲ, ತಕ್ಷೀರು ಸ್ಥಳದ ಅಕ್ಕಪಕ್ಕ ಮನೆಗಳು ಇದ್ದರೂ ಯಾರೂ ಹತ್ತಿರ ಬರಲಿಲ್ಲ, ಮೇಲೆ ಹೇಳಿದ ದಿನ ತಕ್ಷೀರು ಸ್ಥಳಕ್ಕೆ ಹೋಗಲಿಲ್ಲ, ಹಾಗೇ ಆ ದಿನ ನಾನು ಆ ಸ್ಥಳಕ್ಕೆ ಹೋಗದ ಕಾರಣ ಯಾರೂ ಖಾಸಗಿ ಸಾಕ್ಷಿ ಅಲ್ಲಿ ಬರಲಿಲ್ಲ ಎಂದು ಹೇಳುತ್ತಿದ್ದೇನೆಂದರೆ ಸರಿಯಲ್ಲ, ಮಹಜರು ತನ್ನ ಸ್ವ ಹಸ್ತಾಕ್ಷರದಲ್ಲಿದೆ, ಮಹಜರು: ಇತರೆ ದಾಖಲೆಗಳನ್ನು ಕಛೇರಿಯಲ್ಲೇ ಕುಳಿತು ತಯಾರಿಸಿದೆ – ರಸಾಯನಿಕ ಪರೀಕ್ಷೆಗಾಗಿ ಯಾವುದೇ ಬಾಟಲಿಗಳನ್ನು ಕಳುಹಿಸಿಲ್ಲ–ಯಾವುದೇ ಅಕ್ರಮ ಸೊತ್ತುಗಳನ್ನು ವಶಪಡಿಸಿಲ್ಲ ಎಂದರೆ ಸರಿಯಲ್ಲ, ವಾಹನದ ಮಾಲೀಕ ಆರೋಪಿ ಚಂದ್ರಹಾಸನಿಗೂ ವಶಪಡಿಸಿಕೊಂಡ ನಕಲಿ ಮದ್ಯಕ್ಕೂ ಯಾವುದೇ ಸಂಬಂಧ ಇಲ್ಲ– ಕಛೇರಿಯ ಅಂಕಿ ಅಂಶಗಳಿಗೋಸ್ಕರ ಆರೋಪಿತನ ವಿರುದ್ಧ ಒಂದು ಸುಳ್ಳು ಪ್ರಕರಣ ದಾಖಲು ಮಾಡಿ ಆರೋಪ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎಂದರೆ ಸರಿ ಅಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸಾ–2:–**

ಪ್ರಕರಣದ ಮಾದರಿಗಳ ರವಾನೆದಾರರಾದ ಶ್ರೀ.ವಿಶ್ವನಾಥ ಗೌಡ, ಅಬಕಾರಿ ರಕ್ಷಕ, ಪುತ್ತೂರು ವಲಯ ಇವರು ದಿ:14–12–2010ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ದಿ:28–12–2009ರಂದು ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ವಲಯ ಇವರು ಕೋರಿಕೆ ಪತ್ರದೊಂದಿಗೆ ಪ್ರಕರಣದಕ್ಕೆ ಸಂಬಂಧಿಸಿದ ಮಾದರಿ ಬಾಟಲಿಗಳನ್ನು ರಸಾಯನಿಕ ವಿಶ್ಲೇಷಣಾ ಕಛೇರಿಗೆ ಒಪ್ಪಿಸಿರುತ್ತೇನೆ. ದಿ:30–12–2009 ರಂದು ಸದ್ರಿ ಕಛೇರಿಯಿಂದ ರಸಾಯನಿಕ ವಿಶ್ಲೇಷಣಾ ವರದಿ ಹಾಗೂ ವಿಶ್ಲೇಷಿದ ಬಾಟಲಿಗಳನ್ನು ವಾಪಾಸು ಕಛೇರಿಗೆ ತಂದು ಒಪ್ಪಿಸಿರುತ್ತೇನೆ ಎಂದು ಸಾಕ್ಷ್ಯ ನುಡಿದು, ರಕ್ಷಣಾ ಪರ

ವಕೀಲರ ಪಾಟೀ ಸವಾಲಿಗೆ ತಾನು ಯಾವುದೇ ಮಾದರಿ ಸೀಸೆಗಳನ್ನು ರಸಾಯನಿಕ ಪರೀಕ್ಷೆಗಾಗಿ ಕೊಂಡು ಹೋದದ್ದೆ ಇಲ್ಲ ಅಂದರೆ ಸರಿಯಲ್ಲ, ರಸಾಯನಿಕ ವಿಶ್ಲೇಷಕರ ಕಛೇರಿಯಿಂದ ಯಾವುದೇ ವರದಿ ತಂದಿಲ್ಲ ಅಂದರೆ ಸರಿಯಲ್ಲ, ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಡಿಡಬ್ಲ್ಯೂ–1**

ರಕ್ಷಣಾ ಪರ ಸಾಕ್ಷಿದಾರರಾದ ಶ್ರೀ.ಚಂದ್ರಹಾಸ, ನೆಟ್ಟಣಿಗೆ ಮುಡ್ನೂರು ,ಕರ್ನೂರು ಅಂಚೆ, ಪುತ್ತೂರು ಇವರು ದಿ:22–9–2011ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ನೀಡುತ್ತಾ, ತಾನು ಪುತ್ತೂರು ತಾಲೂಕಿನ ಕರ್ನೂರು ಎಂಬಲ್ಲಿಯ ವಾಸಿಯಾಗಿದ್ದು ಅಲ್ಲಿಯೇ ಜಮೀನು ಹೊಂದಿ ಕೃಷಿಕನಾಗಿರುತ್ತೇನೆ,ಪಂಚಲಿಂಗೇಶ್ವರ ಅಟೋ ವರ್ಕ್ಸ್ ಎಂಬ ಗ್ಯಾರೇಜ್‌ನ ಮಾಲೀಕನಾಗಿದ್ದು ಅದನ್ನು 2004ನೇ ಇಸವಿಯಿಂದ ನಡೆಸಿಕೊಂಡು ಬರುತ್ತಿದ್ದೇನೆ, ತಾನು ಮಾರುತಿ ಓಮಿನಿ ಕಾರು ಸಂ: KA–19–M–8380 ಇದರ ಮಾಲೀಕನಾಗಿದ್ದು ಸದ್ರಿ ಕಾರು 1996ನೇ ಮೊಡಲಿನದ್ದಾಗಿರುತ್ತದೆ. ಸದ್ರಿ ವಾಹನವನ್ನು ಖಾಸಗಿ ಉಪಯೋಗಕ್ಕಾಗಿ ವಿಜಯ ಬ್ಯಾಂಕ್ ಈಶ್ವರಮಂಗಲ ಶಾಖೆಯ ಲೋನ್ ಮುಖಾಂತರ ಪಡೆದಿರುತ್ತೇನೆ, ದಿ:27–12–2009 ರಂದು ಅಬಕಾರಿ ಇಲಾಖೆಯ ಅಧಿಕಾರಿಗಳು ಮೇಲೆ ಹೇಳಿದ ಗ್ಯಾರೇಜಿಗೆ ಬಂದು ಅಬಕಾರಿ ಸೊತ್ತುಗಳನ್ನು ಅಕ್ರಮವಾಗಿ ಸಾಗಾಟ ಮಾಡಲಾಗಿದೆ ಎಂಬ ಕಾರಣ ನೀಡಿ ವಾಹನದೊಂದಿಗೆ ತನ್ನನ್ನು ಕರೆದುಕೊಂಡು ಹೋಗಿ ಪ್ರಕರಣ ದಾಖಲಿಸಿರುತ್ತಾರೆ. ಸದ್ರಿ ವಾಹನದಲ್ಲಿ ಯಾವುದೇ ಅಕ್ರಮ ಮದ್ಯ ಸಾಗಾಟ ವಾಗದೇ ಅಬಕಾರಿ ಇಲಾಖೆಯವರು ಸುಳ್ಳು ಕೇಸು ಹಾಕಿರುತ್ತಾರೆ, ಆದುದರಿಂದ ವಾಹನವನ್ನು ಬಿಡುಗಡೆ ಮಾಡಿ ಕೊಡ ಬೇಕೆಂದು ಪ್ರಾಧಿಕಾರದ ನ್ಯಾಯಾಲಯದ ಮುಂದೆ ಸಾಕ್ಷ್ಯ ನೀಡುತ್ತಾ ವಿನಂತಿಸಿ ಕೊಂಡಿರುತ್ತಾರೆ.

ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತ ಅಮಾನತ್ತು ಪಡಿಸಿಕೊಂಡ ವಾಹನವನ್ನು 7 ಷರತ್ತುಗಳನ್ನು ಒಳಗೊಂಡ ಮಧ್ಯಂತರ ಅದೇಶದಂತೆ ಬ್ಯಾಂಕ್ ಗ್ಯಾರೆಂಟಿ ನೀಡಿ ಮಧ್ಯಂತರ ವಶಕ್ಕೆ ಪಡೆದುಕೊಂಡಿರುತ್ತೇನೆ, ಸದ್ರಿ ಷರತ್ತುಗಳನ್ನು ನಾನು ನೋಡಿದ್ದು ಅವುಗಳ ಪೈಕಿ 6ನೇ ಷರತ್ತಿನ ಪ್ರಕಾರ ವಾಹನವನ್ನು ಯಾವುದೇ ಕಾನೂನು ಬಾಹಿರ ಕೃತ್ಯಕ್ಕೆ ಉಪಯೋಗಿಸತಕ್ಕದ್ದಲ್ಲ ಎಂಬುದನ್ನು ನಾನು ಮನಗಂಡಿದ್ದೇನೆ ಸದ್ರಿ ವಾಹನವನ್ನು ಪುತ್ತೂರು ಗ್ರಾಮಾಂತರ ಪೊಲೀಸರು ದಿ:22–1–2011 ರಂದು ವಾಹನದಲ್ಲಿ ಜಾನ್ ಬುಲ್ ವಿಸ್ಕಿಯ ಕ್ವಾರ್ಟರ್ ಬಾಟಲಿಗಳು ಪತ್ತೆಯಾದ ಬಗ್ಗೆ ಆರೋಪ ಹೊರಿಸಿ ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣಾ ಕ್ರೈಂ ಸಂ:3/2011ರಂತೆ ಅಬಕಾರಿ ಕಾಯಿದೆ ಕಲಂ 32,34 ಮತ್ತು 43 ಎ ರಡಿ ಒಂದು ಪ್ರಕರಣವನ್ನು ದಾಖಲಿಸಿರುತ್ತಾರೆ ಎಂದರೆ ಹಾಗೂ ಸದ್ರಿ ಪ್ರಕರಣದಲ್ಲಿ ನಾನೇ ಅರೋಪಿಯಾಗಿರುತ್ತೇನೆ ಎಂದರೆ ಸರಿ, ಆ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಂತೆ ಸದ್ರಿ ಮೇಲಿನ ವಾಹನವನ್ನು ನಾನು ನನ್ನ ಮಧ್ಯಂತರ ಸ್ವಾಧೀನಕ್ಕೆ ಪುನಹ: ಪಡೆದು ಕೊಂಡಿರುವುದಿಲ್ಲ ಎಂದರೆ ಸರಿ, ಪ್ರಕರಣದಲ್ಲಿ ನನ್ನ ವಾಹನವನ್ನು ಯಾವ ಅಬಕಾರಿ ಅಧಿಕಾರಿಯವರು ಅಮಾನತ್ತುಪಡಿಸಿಕೊಂಡಿದ್ದಾರೆ ಎಂಬ ಬಗ್ಗೆ ನನಗೆ ಗೊತ್ತಿಲ್ಲ, ಪ್ರಸ್ತುತ ಪ್ರಕರಣದಲ್ಲಿ ನನ್ನ ವಾಹನವನ್ನು ಅಬಕಾರಿ ಇಲಾಖೆಯವರು ಮುಟ್ಟುಗೋಲು ಹಾಕುವ ಪೂರ್ವದಲ್ಲಿ ನನ್ನಲ್ಲಿ ಅವರಿಗೆ ಯಾವುದೇ ವೈಮನಸ್ಸು ಇರಲಿಲ್ಲ, ವಾಹನವನ್ನು ಅಬಕಾರಿ ಇಲಾಖೆಯವರು ನನ್ನ ಗ್ಯಾರೇಜಿನಿಂದ ವಿನಾ ಕಾರಣ ಕೊಂಡು ಹೋಗಿರುತ್ತಾರೆ ಎಂದು ನಾನು ನನ್ನ ವಕೀಲರಿಗೆ ಈ ಹಿಂದೆ ಎಲ್ಲಾ ಮಾಹಿತಿ ನೀಡಿರುತ್ತೇನೆ, ವಾಹನವನ್ನು ಅಬಕಾರಿ ಇಲಾಖೆಯವರು ಸ್ವಾಧೀನಪಡಿಸಿಕೊಳ್ಳುವ ಪೂರ್ವದಲ್ಲಿ ನಾನು ಅವರ ಕಚೇರಿಗೆ ಹೋಗಿರುವುದಿಲ್ಲ– ನನ್ನ ಪರಿಚಯ ಅವರಿಗೆ ಇದ್ದಿರಲಿಲ್ಲ, ಊರಿನಲ್ಲಿ ಯಾರೂ ನನ್ನನ್ನು ದ್ವೇಷಿಸುವುದಿಲ್ಲ, ದಿ:27–12–2009ರಂದು ಪುತ್ತೂರು ತಾಲೂಕು ನೆಟ್ಟಣಿಗೆ ಮುಡ್ನೂರು ಗ್ರಾಮ, ಕರ್ನೂರು ರಸ್ತೆಯಲ್ಲಿ ಕೇರಳಕ್ಕೆ ಅಕ್ರಮವಾಗಿ ಮದ್ಯ ಸಾಗಾಣಿಕೆ ಆಗುತ್ತಿರುವ ಖಚಿತ ವರ್ತಮಾನದ ಮೇರೆಗೆ ಅಬಕಾರಿ ಇಲಾಖೆರವರು ರಸ್ತೆಗಾವಲು ಮಾಡುತ್ತಿರುವಾಗ ಕರ್ನೂರು ಗಾಳಿಮುಖ ರಸ್ತಯಲ್ಲಿ ನನ್ನ ಬಿಳಿ ಬಣ್ಣದ ಮಾರುತಿ ಓಮಿನಿ ಕಾರು ಸಂ: KA–19–M–8380 ನ್ನು ತಡೆದುನಿಲ್ಲಿಸಿ ಪರಿಶೀಲಿಸಿದರು ಎಂದರೆ ಸರಿಯಲ್ಲ. ಆ ಸಂದರ್ಭಧಲ್ಲಿ ನಾನು ಅನುಮಾನಸ್ಪದ ರೀತಿಯಲ್ಲಿ ವರ್ತಿಸುತ್ತಿದ್ದುದ್ದನ್ನು ಅವರು ಗಮನಿಸಿದ್ದರು , ಪರಿಶೀಲಿಸುವ ಸಂದರ್ಭದಲ್ಲಿ ವಾಹನದ ಸೀಟಿನ ಕಾಲಿಡುವ ಸ್ಥಳದಲ್ಲಿ 2 ಬಿಳಿ ಬಣ್ಣದ ಪಾಲಿಥೀನ್ ಚೀಲಗಳಲ್ಲಿ ಅಕ್ರಮ ಮದ್ಯದ ಬಾಟಲಿಗಳು ಇದ್ದವು ಎಂದರೆ , ಸದ್ರಿ ಮದ್ಯದ ಬಾಟಲಿಗಳನ್ನು ಸಾಗಾಟ ಮಾಡಲು ನನ್ನಲ್ಲಿ ಪರವಾನಿಗೆ ಇರಲಿಲ್ಲ ಎಂದರೆ ಸರಿಯಲ್ಲ, ಆ ಸಂದರ್ಭದಲ್ಲಿ ನಾನು ವಾಹನದ ಚಾಲಕ/ ಮಾಲಕ ಆಗಿದ್ದೇನು, ಅಬಕಾರಿ ಇಲಾಖೆಯವರು ಪಂಚರ ಸಮಕ್ಷಮ ವಾಹನ /ಸೊತ್ತುಗಳನ್ನು ಜಪ್ತುಪಡಿಸಿಕೊಂಡು ಮಹಜರು ಮಾಡಿದ್ದರು ಎಂದರೆ ಸರಿಯಲ್ಲ, ಮುಂದುವರಿದು ತನಿಖೆ ನಡೆಸಿ ನನ್ನ ವಿರುದ್ಧ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿ ಸಲ್ಲಿಸಿರುತ್ತಾರೆ ಎಂದರೆ ಸರಿ, ನನ್ನ ವಾಹನವನ್ನು ಪದೇಪದೇ ನ್ಯಾಯಾಲಯದ ಷರತ್ತು ಗಳು ಇದ್ದರೂ ಕೂಡಾ ಅಕ್ರಮ ದಂಧೆಯಲ್ಲಿ ತೊಡಗಿಸಿರುತ್ತೇನೆ ಎಂದರೆ ಸರಿಯಲ್ಲ, ನನ್ನ ವಿರುದ್ಧ ಅಬಕಾರಿ ಇಲಾಖೆಯವರು ವಿನಾ ಕಾರಣ ಕೇಸು ಹಾಕಿದ್ದಾರೆ ಎಂದು ಈ ಪ್ರಾಧಿಕಾರದ ಮುಂದೆ ನಾನು ಸುಳ್ಳು ನುಡಿಯುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಪ್ರಕರಣದಲ್ಲಿ ಇತ್ತಂಡಗಳ ವಾದ ವಿವಾದವನ್ನು ಅಲಿಸಲಾಗಿ, ರಕ್ಷಣಾ ಪರ ವಕೀಲರು ವಾದ ಮಂಡಿಸುತ್ತಾ, ದಿನಾಂಕ:27–12–2009ರಂದು ವಾಹನ ಮಾರುತಿ ಓಮಿನಿ ಕಾರು ಸಂ: KA–19–M–8380ರಲ್ಲಿ ಅಕ್ರಮ ಮದ್ಯ ಸಾಗಾಟ ಮಾಡಿರುವುದನ್ನು ಅಲ್ಲಗಳೆಯುತ್ತ ತನ್ನ ಕಕ್ಷಿದಾರರ ವಿರುದ್ಧ ಅಬಕಾರಿ ಇಲಾಖೆಯವರು ಸುಳ್ಳು ಮೊಕದ್ದಮೆ ದಾಖಲಿಸಿ ರುವುದಾಗಿ ವಾದ ಮಂಡಿಸುತ್ತಾರೆ. ಅಭಿಯೋಗ ಉಪ ನಿರ್ದೇಶಕರು ವಾದ ಮಂಡಿಸುತ್ತಾ ಪುತ್ತೂರು ಗ್ರಾಮಾಂತರ ಪೊಲೀಸರು ದಿ:22–1–2011 ರಂದು ಇದೇ ವಾಹನ ಸಂ: KA–19–M–8380 ಮಾರುತಿ ಓಮಿನಿ ಕಾರಿನಲ್ಲಿ 69.120 ಲೀ ಜಾನ್ ಬುಲ್ ವಿಸ್ಕಿ ಎಂಬ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣಾ ಕ್ರೈಂ ಸಂ:3/2011ರಂತೆ ಅಬಕಾರಿ ಕಾಯಿದೆ ಕಲಂ 32,34 ಮತ್ತು 43 ಎ ರಡಿ ಪ್ರಕರಣವನ್ನು ದಾಖಲಿಸಿಕೊಂಡು ವಾಹನ ಮತ್ತು ಸೊತ್ತುಗಳನ್ನು ಜಪ್ತುಪಡಿಸಿ

ಕೊಂಡಿರುವುದರಿಂದ ಪ್ರಕರಣದ ಈ ವಾಹನ ಮತ್ತೇ ಇಲಾಖಾ ವಶದಲ್ಲಿರು ವುದನ್ನು ಉಲ್ಲೇಖಿಸಿ ಪ್ರಬಲವಾಗಿ ವಾದಿಸುತ್ತ ಸದ್ರಿ ಅರೋಪಿತನು ಓರ್ವ ವೃತ್ತಿನಿರತ ಅಕ್ರಮ ಮದ್ಯ ಸಾಗಾಟಗಾರನ್ನಾಗಿರುವುದು ಹಾಗೂ ವಾಹನವನ್ನು ಪದೇ ಪದೇ ಅಕ್ರಮ ಮದ್ಯ ಸಾಗಾಟಕ್ಕೆ ಬಳಸುತ್ತಿರುವುದು ವೇದ್ಯವಾಗಿರುವುದರಿಂದ ಹಾಗೂ ಪ್ರಾಧಿಕಾರದ ನ್ಯಾಯಾಲಯದಲ್ಲಿ ಪ್ರಸ್ತುತ ಇರುವ ಈ ಪ್ರಕರಣದಲ್ಲಿ ಅರೋಪಿತ/ವಾಹನದ ಮಾಲಿಕರು ವಾಹನವನ್ನು ಮದ್ಯಂತರ ಬಿಡುಗಡೆ ಸಂದರ್ಭದಲ್ಲಿ ಪಡೆದ ಅದೇಶದ ಷರತ್ತುಗಳನ್ನು ಕೂಡಾ ಉಲ್ಲಂಘಿಸಿರುವುದನ್ನು ಉಲ್ಲೇಖಿಸುತ್ತಾ ಸದ್ರಿ ವಾಹನವನ್ನು ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಳ್ಳುವುದು ಅವಶ್ಯವಾಗಿರುತ್ತದೆ ಮಾತ್ರವಲ್ಲದೇ ಈ ಪ್ರಕರಣದಲ್ಲಿ ಮದ್ಯಂತರ ಬಿಡುಗಡೆಯ ಷರತ್ತಿಗನುಗುಣವಾಗಿ ವಾಹನದ ಮಾಲೀಕರು ಒಪ್ಪಿಸಿರುವ ಬ್ಯಾಂಕ್ ಗ್ಯಾರೆಂಟಿಯನ್ನು ಕೂಡಾ ಮುಟುಗೋಲು ಹಾಕಿಕೊಂಡು ಸರ್ಕಾರದ ಖಾತೆಗೆ ಜಮೆ ಮಾಡುವುದು ತೀರಾ ಅವಶ್ಯಕವಾಗಿರುತ್ತದೆ ಎಂದು ತಮ್ಮ ವಾದವನ್ನು ಮಂಡಿಸಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳು, ಹಾಗೂ ಸಹಾಯಕ ಅಭಿಯೋಗ ನಿರ್ದೇಶಕರ ವಾದ ಮತ್ತು ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿ:27–12–2009 ರಂದು ಮಾರುತಿ ಒಮಿನಿ ಕಾರು ಸಂ:KA–19–M–8380 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಅರೋಪಿತ ಮದ್ಯವನ್ನು ಹೊಂದಿ ಸಾಗಾಟ ಮಾಡಿರುವುದನ್ನು ಪತ್ತೆಹಚ್ಚಿ, ಅಬಕಾರಿ ಉಪ ನಿರೀಕ್ಷಕರು(1), ಪುತ್ತೂರು ವಲಯ ಇವರ ಪ್ರ.ಮಾ.ವ ಸಂ: 5/09–10, ದಿ:27–12–2009ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಮದ್ಯವನ್ನು ಅನಧಿಕೃತವಾಗಿ ವಾಹನದಲ್ಲಿ ಸಾಗಾಟ ಮಾಡಲಾಗಿಲ್ಲ ಎಂಬುದನ್ನು ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ವಿಚಾರಣೆ ವೇಳೆಯಲ್ಲಿ ಸಾಭೀತುಪಡಿಸಲು ವಿಫಲರಾಗಿ ಕರ್ನಾಟಕ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ಹೇಳುವಂತಹ ರುಜುವಾತುವಿನ ಭಾರವನ್ನು ಸಮಂಜಸವಾಗಿ ನಿಭಾಯಿಸದೇ ಇರುವುದರಿಂದ ಅಭಿಯೋಜನ ಪರ ಮಂಡಿಸಿದ ಸಾಕ್ಷ್ಯಾಧಾರಗಳನ್ನು ಅವಲಂಬಿಸಿ ವಾಹನದ ಮಾಲೀಕರೇ ಈ ಕೃತ್ಯವನ್ನು ಎಸಗಿರುತ್ತಾರೆ ಎಂಬ ಬಗ್ಗೆ ನಿರ್ಣಯಕ್ಕೆ ಬರಲು ಸಾಕಷ್ಟು ವಿಷಯ ಸಾಮಾಗ್ರಿಗಳು ಕಂಡು ಬಂದಿರುವುದರಿಂದ, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕ ವಾಗಿ ಪರಿಗಣಿಸಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದ್ದು, ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ವಲಯ ಇವರು ದಿ:30–12–2009ರಂದು ನೀಡಿರುವ ವಿಶ್ಲೇಷಣಾ ವರದಿಯಲ್ಲಿ ಮದ್ಯದಲ್ಲಿ ಮದ್ಯಸಾರ ಪ್ರಮಾಣ ಎಲ್ಲಾ ಮಾದರಿಗಳಲ್ಲೂ 43.3% ಇದ್ದು All the samples are confirms to the standards ಎಂದು ದೃಡೀಕರಿಸಲ್ಪಟ್ಟಿರುವುದರಿಂದ ಜಪ್ತುಪಡಿಸಿಕೊಂಡ ವಸ್ತುವು ಅಬಕಾರಿ ಸೊತ್ತು (ಮದ್ಯ) ಆಗಿರುವುದು ಸಾಬೀತಾಗಿದ್ದು ಎರಡನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಬಕಾರಿ ಸೊತ್ತುಗಳ ಅಕ್ರಮ ಮಾರಾಟಕ್ಕೆ ವಾಹನವನ್ನು ಕಾನೂನಿನ ಅರಿವು ಇಲ್ಲದೇ ತಿಳುವಳಿಕೆಯ ಕೊರತೆಯಿಂದ ಬಳಸಲಾಗಿದೆ ಎಂಬುದನ್ನು ಸಾಕ್ಷ್ಯಾಧಾರ ಗಳೊಂದಿಗೆ ಸಾಭೀತು ಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಕೃತಕ / ಕಲ್ಪಿತ ರಕ್ಷಣಾ ಹೇಳಿಕೆಗಳನ್ನು ನೀಡಿರುವುದು ಮತ್ತು ನಂಬಲಾರ್ಹವಾದ ಸೂಕ್ತ ಪುರಾವೆ ಗಳನ್ನು ಒದಗಿಸಿ ತನ್ನ ರುಜುವಾತು ಭಾರವನ್ನು ಸಮರ್ಪಕವಾಗಿ ನಿರ್ವಹಿಸದೇ ಇರುವುದರಿಂದ ವಾಹನವನ್ನು ತನ್ನ ಅರಿವಿಗೆ ಬಾರದೇ ಇಂತಹ ಅಕ್ರಮ ಮದ್ಯ ಮಾರಾಟಕ್ಕೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಈ ಮೇಲಿನ ಕಾರಣಗಳಿಂದ ಮೂರನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಪ್ರಕರಣದಲ್ಲಿ ವಾಹನದ ಮಾಲೀಕರು 7 ಷರತ್ತುಗಳನ್ನು ಒಳಗೊಂಡ ದಿ:27–5–2010ರ ಮದ್ಯಂತರ ಅದೇಶದ ಅಡಿಯಲ್ಲಿ ವಾಹನವನ್ನು ಮದ್ಯಂತರ ಸುಪರ್ಧಿಗೆ ಪಡೆದುಕೊಂಡು, ಷರತ್ತು ಕ್ರಮ ಸಂ:6ನ್ನು ಉಲ್ಲಂಘನೆ ಮಾಡಿ ಮತ್ತೇ ವಾಹನವನ್ನು ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿಕೊಂಡ ಮೇರೆಗೆ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ ಇವರ ಕ್ರೈಂ ಸಂ:03/2011 ದಿ:22–1–2011ರಂತೆ (ಕಡತ ಸಂ: ಎಸ್‌ಡಿಕೆ/188/ಡಿಟಿಸಿಆರ್/2010–12 ) ಪ್ರಕರಣ ದಾಖಲಾಗಿ 2ನೇ ಬಾರಿಗೆ ವಾಹನ ಇಲಾಖಾ ಸುಪರ್ಧಿಯಲ್ಲಿ ಇರುವುದರಿಂದ ವಾಹನದ ಮಾಲೀಕರು ವಾಹನವನ್ನು ಪದೇ ಪದೇ ಅಕ್ರಮಕ್ಕೆ ಬಳಸಿಕೊಂಡು ಓರ್ವ ವೃತ್ತಿ ನಿರತ ಅಕ್ರಮ ಮದ್ಯ ಸಾಗಾಟಗಾರನೆಂಬುದನ್ನು ಇಲ್ಲಿ ಪ್ರಬಲವಾಗಿ ಉಲ್ಲೇಖಿಸಬಹುದಾಗಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ದಿ:27–12–2009ರಂದು ಅಬಕಾರಿ ಉಪ ನಿರೀಕ್ಷಕರು(1), ಪುತ್ತೂರು ವಲಯ ಇವರು ಪ್ರಕರಣ ಸಂ:5/2009–10ರಂತೆ ಅಕ್ರಮವಾಗಿ 21.160 ಲೀಟರು ಮದ್ಯವನ್ನು ವಾಹನ ಮಾರುತಿ ಒಮಿನಿ ಕಾರು ಸಂ: KA–19–M–8380 ರಲ್ಲಿ ಇಟ್ಟು ಕೊಂಡು ಸಾಗಾಟ ಮಾಡಿರುವುದು ಸಾಭೀತಾಗಿದ್ದು, ಇದು ಕರ್ನಾಟಕ ಅಬಕಾರಿ 1965ರ 11 ಮತ್ತು 14 ರ ಪ್ರಕಾರ ಅಪರಾಧ ಹಾಗೂ 32,38ಎ ರ ಪ್ರಕಾರ ಶಿಕ್ಷಾರ್ಹ ವಾಗಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ 43(ಎ)2 ರಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ತೀರ್ಮಾನಿಸಲಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

## ಆದೇಶ

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು(1), ಪುತ್ತೂರು ವಲಯ ಇವರ ತಕ್ಷೀರು ಸಂ:5/2009-10,ದಿ:27-12-2009ರಲ್ಲಿ ಜಪ್ತುಪಡಿಸಿರುವ ಮಾರುತಿ ಒಮಿನಿ ಕಾರು ಸಂ: KA-19-M-8380 (ಚಾಸೀಸ್ ಸಂ: ST91-IN-164606 ಮತ್ತು ಇಂಜಿನ್ ಸಂ: F8BI-IN-1356744) ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ: 27-5-2010ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ವಾಹನವನ್ನು ಮದ್ಯಂತರ ಅದೇಶದ ಷರತ್ತುಗಳನ್ನು ಉಲ್ಲಂಘಿಸಿ ಮತ್ತೆ ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿಕೊಂಡು ಪೊಲೀಸ್ ಉಪ ನಿರೀಕ್ಷಕರು,ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ ಇವರ ಕ್ರೈಂ ಸಂ:3/2011 ದಿ:22-01-2011ರಂತೆ ಜಪ್ತಾಗಿ ವಾಹನವು ಮತ್ತೆ ಪ್ರಾದಿಕಾರದ ಮುಟ್ಟುಗೋಲು ಪ್ರಕ್ರಿಯೆಗೆ ಒಳಗೊಂಡಿರುವುದರಿಂದ ಈ ಪ್ರಕರಣಕ್ಕೆ ಸಂಬಂಧಿಸಿ ಮದ್ಯಂತರ ಬಿಡುಗಡೆ ಸಂದರ್ಭದಲ್ಲಿ ವಾಹನದ ಮಾಲೀಕರು ವಿಜಯ ಬ್ಯಾಂಕ್ ಈಶ್ವರಮಂಗಲ ಶಾಖೆ ಇಲ್ಲಿಂದ ರೂ.50,000/- ಮೌಲ್ಯಕ್ಕೆ ಪಡೆದು ಪ್ರಾಧಿಕಾರಕ್ಕೆ ಒಪ್ಪಿಸಿರುವ ಬ್ಯಾಂಕ್ ಗ್ಯಾರೆಂಟಿ ಸಂ:12351/ BG/S/00002ನ್ನು ಇನ್‌ವೋಕ್ ಮಾಡಿಕೊಂಡು ಅಡಕವಾಗಿರುವ ಮೊತ್ತವನ್ನು ಇಲಾಖಾ ಖಾತೆಗೆ ಹೊಂದಾಣಿಕೆ ಮಾಡಿ ಕೊಳ್ಳಲು ಅದೇಶಿಸಿದೆ.

ಪ್ರಕರಣದಲ್ಲಿ ಜಪ್ತು ಪಡಿಸಿಕೊಳ್ಳಲಾದ ಮದ್ಯವನ್ನು ಈ ಪ್ರಾದಿಕಾರದ ಸಮ ಸಂಖ್ಯೆ ಅದೇಶ ದಿನಾಂಕ:29-5-2010ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡಿರುವುದನ್ನು ಸ್ಥಿರೀಕರಿಸಿದ್ದೇನೆ.

ಈ ಆದೇಶವನ್ನು ದಿನಾಂಕ:05-01-2012ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

### ಅನುಬಂಧ-I

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:-

ಪ್ರಾ.ಸಾ-I : ಶ್ರೀ.ಯಾಕೂಬ್ ಖಾನ್, ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ವಲಯ

ಪ್ರಾ.ಸಾ-2 : ಶ್ರೀ.ವಿಶ್ವನಾಥ ಗೌಡ,ಅ.ರ,ಪುತ್ತೂರು ವಲಯ

### ಅನುಬಂಧ-II

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:-**

ನಿಶಾನೆ ಪಿ-I : ಮಹಜರು ಪ್ರತಿ , ನಿಶಾನೆ ಪಿ-1 ಎ :ಅದರ ಮೇಲಿನ ಸಹಿ

ನಿಶಾನೆ ಪಿ-2 : ಪ್ರಥಮ ಮಾಹಿತಿ ವರದಿ, ನಿಶಾನೆ ಪಿ-2ಎ : ಮೇಲಿನ ಸಾಕ್ಷಿ ಸಹಿ

ನಿಶಾನೆ ಪಿ-3 : ರಸಾಯನಿಕ ವಿಶ್ಲೇಷಣಾ ವರದಿ ,ನಿಶಾನೆ ಪಿ-3 ಎ : ಅದರ ಮೇಲಿನ ಸಾಕ್ಷಿ ಸಹಿ

ನಿಶಾನೆ ಪಿ-4 : ಬಿ ಎಕ್ಸ್ ಟ್ರಾಕ್ಟ್ ವರದಿ ನಿಶಾನೆ ಪಿ-4 ಎ : ಅದರ ಮೆ ೕಲಿನ ಸಾಕ್ಷಿ ಸಹಿ

ನಿಶಾನೆ ಪಿ-5 : ದಿ:11-2-2010ರ ವರದಿ , ನಿಶಾನೆ ಪಿ-5ಎ: ಅದರ ಮೇಲಿನ ಸಾಕ್ಷಿ ಸಹಿ

ನಿಶಾನೆ ಪಿ-6 : ದಿ:1-2-2010ರ ವರದಿ, ನಿಶಾನೆ ಪಿ-6ಎ: ಅದರ ಮೇಲಿನ ಸಾಕ್ಷಿ ಸಹಿ

### ಅನುಬಂಧ-III

**ರಕ್ಷಣಾ ಪರ ವಿಚಾರಣೆ ಮಾಡಲಾದ ಸಾಕ್ಷಿದಾರರು :-**

ಡಿಡಬ್ಲ್ಯೂ-ಡಿ-1 : ಶ್ರೀ. ಚಂದ್ರಹಾಸ.ಬಿ, ಬಿನ್:ಮೋನಪ್ಪ ಪೂಜಾರಿ,ಬೆದ್ರಾಡಿ ಹೌಸ್, ನೆಟ್ಟಣಿಗೆ ಮುಡ್ನೂರು, ಕರ್ನೂರು ಅಂಛೆ, ಪುತ್ತೂರು (ವಾಹನದ ಮಾಲೀಕ)

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–

–ಯಾವುದು ಇರುವುದಿಲ್ಲ–

**ಬಿ.ವಿ ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿ.ಆರ್. 96**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು. ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ದಬ್ಬೇಘಟ್ಟ, ತುರುವೇಕೆರೆ ತಾಲ್ಲೂಕು ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಪ್ರಸ್ತಾವೆ ಸಂ.ಸ.ನಿ–34/ಸಮಾಪನೆ/3/2010–11 ದಿ:27–1–2012.

2) ಈ ಕಛೇರಿಯ ಸಮಾಪನಾ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ: 09:2010–11 ದಿನಾಂಕ:30–6–10.

3) ಸದರಿ ಸಂಘದ ಸಮಾಪನಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ದಿ ಅಧಿಕಾರಿ ತುರುವೇಕೆರೆ ಇವರ ಪತ್ರ ಸಂ.ಸ.ಅ.ಅ ತು: ನೊಂದಣಿ ರದ್ದತಿ 112:2011–12 ದಿನಾಂಕ:25–1–2012.

**ಪ್ರಸ್ತಾವನೆ:**

ತುರುವೇಕೆರೆ ತಾಲ್ಲೂಕು ದಬ್ಬೇಘಟ್ಟ ಗ್ರಾಮದ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ದಬ್ಬೇಘಟ್ಟ ಈ ಸಂಘವು ನೊಂದಣಿಯಾದ ಉದ್ದೇಶದ ರೀತ್ಯಾ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ದಿ ಅಧಿಕಾರಿ ತುರುವೇಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸುವಂತೆ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ ತಿಪಟೂರು ಇವರು ಕೋರಿಕೊಂಡ ಹಿನ್ನೆಲೆಯಲ್ಲಿ ಉಲ್ಲೇಖ(2)ರ ಈ ಕಛೇರಿ ಆದೇಶದಂತೆ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ದಿ ಅಧಿಕಾರಿ ತುರುವೇಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಈ ಕಛೇರಿಯಿಂದ ಆದೇಶಿಸಲಾಗಿತ್ತು.

ಸಂಘದ ಋಣ ಸಮಾಪನಾಧಿಕಾರಿಗಳು ಉಲ್ಲೇಖ (3)ರ ರೀತ್ಯಾ ಸಂಘದ ಆಸ್ತಿ ಜವಾಬ್ದಾರಿ ವಿಲೇವಾರಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರಿಗೆ ಸಲ್ಲಿಸಿದ್ದು, ಸದರಿಯವರು ಉಲ್ಲೇಖ(1)ರಲ್ಲಿ ಸೂಚಿಸಿರುವಂತೆ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಶಿಫಾರಸ್ಸು ಮಾಡಿರುವ ಪ್ರಯುಕ್ತ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

**ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್–03/2011–12, ದಿನಾಂಕ:31–1–2012.**

ಶ್ರೀ.ಆರ್.ಲೋಕೇಶ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21–11–01ರಲ್ಲಿ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ದಬ್ಬೇಘಟ್ಟ ತುರುವೇಕೆರೆ ತಾಲ್ಲೂಕು ಇದರ ನೊಂದಣಿ ಸಂಖ್ಯೆ:ಸನಿ–34/ನೊಂದಣಿ/26816/2000–01 ದಿನಾಂಕ:30–9–2000ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಸಂಘವು ಇಂದಿನಿಂದ ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜನೆಗೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿ:31–1–2012ರಂದು ನೀಡಿದೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
**ತುಮಕೂರು ಜಿಲ್ಲೆ, ತುಮಕೂರು.**

**ಪಿ.ಆರ್. 225**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು. ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಶ್ರೀ ಕಲ್ಲೇಶ್ವರಸ್ವಾಮಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬರಗೂರು ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ನೊಂದಣಿ ರದ್ದತಿ ಕುರಿತು.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ ತಿಪಟೂರು ಇವರ ಪ್ರಸ್ತಾವೆ ಸಂಖ್ಯೆ:ಸನಿ34/ನೊಂದಣಿ ರದ್ದತಿ:20:2010–11 ದಿ:9–1–2012.

2) ಈ ಕಛೇರಿಯ ಸಮಾಪನಾ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ ಸಿಆರ್–03/2010–11 ದಿನಾಂಕ:28–10–2010.

**ಪ್ರಸ್ತಾವನೆ:**

ಶ್ರೀ ಕಲ್ಲೇಶ್ವರಸ್ವಾಮಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬರಗೂರು ಚಿಕ್ಕನಾಯಕನಹಳ್ಳಿ ತಾಲ್ಲೂಕು ಈ ಸಂಘವು ಸ್ಥಗಿತಗೊಂಡ ಕಾರಣ ಸಂಘವನ್ನು ಉಲ್ಲೇಖ(2)ರ ಈ ಕಛೇರಿ ಆದೇಶದಂತೆ ಸಮಾಪನೆಗೊಳಿಸಿ ಸಂಘದ ಆಸ್ತಿ ಜವಾಬ್ದಾರಿ ವಿಲೇವಾರಿಗೆ ಅನುಮೋದನೆ ಪಡೆದು ತೀರುವಳಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಋಣಸಮಾಪನಾಧಿಕಾರಿಗಳು ಆಸ್ತಿ ವಿಲೇವಾರಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿರುವುದನ್ನು ಉಲ್ಲೇಖ(1)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ರವರು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್ 06 /ನೊಂರ/2011–12, ದಿನಾಂಕ:24–1–2012.**

ಶ್ರೀ.ಆರ್.ಲೋಕೇಶ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21–11–2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಶ್ರೀಕಲ್ಲೇಶ್ವರಸ್ವಾಮಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬರಗೂರು ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ನೊಂದಣಿ ಸಂಖ್ಯೆ ಸನಿ–34/ನೊಂದಣಿ 30786/2001–02 ದಿನಾಂಕ:8–6–2001ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದ್ದು, ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜನೆಗೊಂಡಿರುತ್ತದೆ.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:24–1–2012ರಂದು ನೀಡಿದೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
**ತುಮಕೂರು ಜಿಲ್ಲೆ, ತುಮಕೂರು.**

**ಪಿ.ಆರ್. 223**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು. ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ** : ಶ್ರೀಬಸವೇಶ್ವರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮೇಲನಹಳ್ಳಿ ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ನೊಂದಣಿ ರದ್ದತಿ ಕುರಿತು.

**ಉಲ್ಲೇಖ** : 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ ತಿಪಟೂರು ಇವರ ಪ್ರಸ್ತಾವೆ ಸಂಖ್ಯೆ:ಸನಿ34/ನೊಂದಣಿ ರದ್ದತಿ:2011–12 ದಿ:9–1–2012.

2) ಈ ಕಛೇರಿಯ ಸಮಾಪನಾ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ ಸಿಆರ್–06/2010–11 ದಿನಾಂಕ:10–12–2010.

3) ಋಣಸಮಾಪನಾಧಿಕಾರಿಗಳು ಪ್ರಸ್ತಾವೆ ಸಂ.ಸ.ಅ.ಅ/ಚಿ.ನಾ.ಹಳ್ಳಿ ನೊಂದಣಿ ರದ್ದತಿ:38:2011–12 ದಿನಾಂಕ:20–12–2011.

**ಪ್ರಸ್ತಾವನೆ:**

ಶ್ರೀ ಬಸವೇಶ್ವರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮೇಲನಹಳ್ಳಿ ಚಿಕ್ಕನಾಯಕನಹಳ್ಳಿ ತಾಲ್ಲೂಕು ಈ ಸಂಘವು ನೊಂದಣಿಯಾದ ಉದ್ದೇಶದಂತೆ ಕಾರ್ಯಚಟುವಟಿಕೆ ಸ್ಥಗಿತಗೊಂಡ ಕಾರಣ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಚಿಕ್ಕನಾಯಕನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸುವಂತೆ ಉಲ್ಲೇಖ (1)ರ ಪ್ರಸ್ತಾವೆಯಲ್ಲಿ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ ತಿಪಟೂರು ಕೋರಿದ್ದರ ಮೇರೆಗೆ ಉಲ್ಲೇಖ(2)ರ ರೀತ್ಯಾ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಚಿಕ್ಕನಾಯಕನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಸಂಘದ ಪ್ರಭಾರ ಪಡೆದು ಆಸ್ತಿ ಜವಾಬ್ದಾರಿ ವಿಲೇವಾರಿಗೆ ಅನುಮೋದಿಸಿಕೊಂಡು ತೀರುವಳಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಆಸ್ತಿ ವಿಲೇವಾರಿ ಮಾಡಿ ನೊಂದಣಿ ರದ್ದತಿಗೆ ಉಲ್ಲೇಖ(3)ರ ರೀತ್ಯಾ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ನೀಡಿದೆ.

## ಆದೇಶ

**ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ನೊಂರ/14/2011–12, ದಿನಾಂಕ:31–1–2012.**

ಶ್ರೀ. ಆರ್.ಲೋಕೇಶ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21–11–2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಶ್ರೀ ಬಸವೇಶ್ವರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮೇಲನಹಳ್ಳಿ ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ನೊಂದಣಿ ಸಂಖ್ಯೆ ಸನಿ34/ನೊಂದಣಿ 26803/2000–01 ದಿನಾಂಕ:21–8–2000ನ್ನು ರದ್ದುಪಡಿಸಿರುತ್ತೇನೆ. ಇಂದಿನಿಂದ ಸಂಘವು ವಿಸರ್ಜನೆಗೊಂಡಿರುತ್ತದೆ ಮತ್ತು ಅಸ್ತಿತ್ವದಲ್ಲಿರುವುದಿಲ್ಲ.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:31–1–2012ರಂದು ನೀಡಿದೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
**ತುಮಕೂರು ಜಿಲ್ಲೆ, ತುಮಕೂರು.**

**ಪಿ.ಆರ್. 224**

## ಸಹಕಾರ ಇಲಾಖೆ
## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ವಿಷಯ :** ಸೀ ಐಲ್ಯಾಂಡ್ ಹತ್ತಿ ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ ನಿ., ಮುರಪ್ಪೆಮನೆ, ಹೊಸನಗರ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ : 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಸಾಗರ ಉಪವಿಭಾಗ ಸಾಗರ ಇವರ ಪತ್ರ ನಂ.ಎಆರ್25/ಡಿಎಲ್‌ಎಸ್/ಎಲ್‌ಕ್ಯೂಡಿ/05/2011–12 ದಿನಾಂಕ:17–08–2011

2) ಈ ಕಚೇರಿಯ ಸಮಸಂಖ್ಯೆ ಕಾರಣ ಕೇಳಿ ನೋಟಿಸು ದಿನಾಂಕ : 18–11–2011

**ಪ್ರಸ್ತಾವನೆ**

ಸೀ ಐಲ್ಯಾಂಡ್ ಹತ್ತಿ ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ ನಿ., ಮುರಪ್ಪೆಮನೆ, ಹೊಸನಗರ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಸಾಗರ ಉಪವಿಭಾಗ ಸಾಗರ ಇವರ ಆದೇಶ ಸಂಖ್ಯೆ:–ಎಆರ್‌ಎಸ್/ಆರ್‌ಸಿಎಸ್/1847/1972–73 ದಿನಾಂಕ:18–08–1972 ರಲ್ಲಿ ತಾಲ್ಲೂಕುಗಿಂತ ಕಡಿಮೆ ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿ ನೊಂದಣಿಯಾಗಿರುತ್ತದೆ. ಸಂಘವು ಆಡಳಿತ ಮಂಡಳಿಯ ಸಭೆಗಳನ್ನು ಮತ್ತು ಸಂಘದ ಉಪನಿಯಮದ ಉದ್ದೇಶಗಳನ್ನು ಅನುಷ್ಠಾನಗೊಳಿಸಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುತ್ತದೆ 2009–10ನೇ ಸಾಲಿನವರೆಗೆ ಸಂಘದ ಲೆಕ್ಕಪತ್ರಗಳು ಆಡಿಟ್ ಆಗಿದ್ದು, ಸಂಘದಲ್ಲಿ 128 ಜನ ಸದಸ್ಯರಿದ್ದು, ಸಂಘವು ಸಫಲತೆಯನ್ನು ಹೊಂದಿ ಕಾರ್ಯ ನಿರ್ವಹಿಸಲು ಯಾವುದೇ ಸದಸ್ಯರಿಗೆ ಆಸಕ್ತಿ ಇಲ್ಲದಿರುವುದರಿಂದ ಸಂಘವನ್ನು ಸಮಾಪನೆಗೊಳಿಸಲು ಸೂಕ್ತವೆಂದು ಉಲ್ಲೇಖ(1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರರವರು ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ.

ಉಲ್ಲೇಖ (1) ರ ಪ್ರಸ್ತಾವನೆಯನ್ನು ಪರಿಗಣಿಸಿ, ಸಂಘದ ಆಡಳಿತ ಮಂಡಳಿ ಸದ್ಯಸರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 72 ರನ್ವಯ ಏಕೆ? ಸಮಾಪನೆಗೊಳಿಸಬಾರದು ಎಂದು ಈ ಕಚೇರಿಯ ಉಲ್ಲೇಖ (2) ರ ಕಾರಣ ಕೇಳಿ ನೋಟಿಸನ್ನು ನೀಡಲಾಗಿತ್ತು. ಸದರಿ ಕಾರಣ ಕೇಳಿ ನೋಟಿಸು ಸಂಘದ ಆಡಳಿತ ಮಂಡಳಿ ಸದ್ಯಸರಿಗೆ ಜಾರಿಯಾಗಿರುತ್ತದೆ. ಈ ಕಚೇರಿಯ ಕಾರಣ ಕೇಳಿ ನೋಟಿಸಿಗೆ ಸಂಘದ ಆಡಳಿತ ಮಂಡಳಿ ಸದ್ಯಸರಿಂದ ಯಾವುದೇ ಆಕ್ಷೇಪಣೆಗಳಾಗಲೀ, ಲಿಖಿತ ಹೇಳಿಕೆಗಳಾಗಲೀ ಬಂದಿರುವುದಿಲ್ಲಾ. ಸಂಘವನ್ನು ಮುನ್ನೆಡಿಸಿಕೊಂಡು ಹೋಗಲು ಯಾವುದೇ ಸದಸ್ಯರಲ್ಲಿ ಆಸಕ್ತಿ ಇರುವುದಿಲ್ಲಾ. ಈ ಸಹಕಾರ ಸಂಘವನ್ನು ಇದೇ ಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸದ್ಯಸರೀಗಾಗಲೀ, ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲಾ ಎಂದು ಪರಿಗಣಿಸಿ, ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸಂಖ್ಯೆ.ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–38/2011–12/1710, ದಿನಾಂಕ: 31–01–2012**

## ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಮತ್ತು ಸರ್ಕಾರದ ಅಧಿಸೂಚನೆನಂ:ಸಿಒ 139 ಸಿಎಲ್‌ಎಂ 2010 ದಿನಾಂಕ:17–02–2011 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಶೋಕ ವೆಂ.ಮೊರಬ ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು,ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ಆದ ನಾನು ಸೀ ಐಲ್ಯಾಂಡ್ ಹತ್ತಿ ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ ನಿ., ಮುರಪ್ಪೆಮನೆ, ಹೊಸನಗರ

ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ರಂತೆ ಶ್ರೀ ಎಂ.ಸಿ ಮಂಜುನಾಥ್,ದ್ವಿತಿಯ ದರ್ಜೆ ಸಹಾಯಕರು ಸಹಕಾರ ಸಂಘಗಳ ಉಪನಿಬಂಧಕರ ಕಚೇರಿ,ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು 15ದಿನಗಳ ಒಳಗೆ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು ನಿಯಮಗಳು 1960 ರ ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋಧನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:31-01-2012 ರಂದು ನೀಡಲಾಗಿದೆ.

**ಅಶೋಕ ವೆಂ.ಮೊರಬ,**
ಸಹಕಾರ ಸಂಘಗಳ ಉಪ ನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 195**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ವಿಷಯ:** ಸಮಾಪನೆಯಲ್ಲಿರುವ ಶ್ರೀರಾಮಕೃಷ್ಣ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ, ನಿ., ಆನಂದಪುರ. ಸಾಗರ ತಾ.,ಇದರ ಸಮಾಪನಾಧಿಕಾರಿ ಮರು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಚೇರಿಯಆದೇಶನಂ,ಡಿಆರ್ಎಸ್/ಕಾನೂನು3/ಡಿಎಲ್ಎಸ್/100/1997-98 ದಿನಾಂಕ 18-08-1998

**ಪ್ರಸ್ತಾವನೆ**

ಸಮಾಪನೆಯಲ್ಲಿರುವ ಶ್ರೀ ರಾಮಕೃಷ್ಣ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ, ನಿ.,ಆನಂದಪುರ. ಸಾಗರ ತಾ.,ಈ ಸಹಕಾರ ಸಂಘವನ್ನು ಉಲ್ಲೇಖ(1)ರ ಈ ಕಚೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ, ಮೇಲ್ವಿಚಾರಕರು, ಕರ್ನಾಟಕ ರಾಜ್ಯ ಖಾದಿ ಗ್ರಾಮೋದ್ಯೋಗ ಮಂಡಳಿ ನಿ., ಸಾಗರ ತಾ.,ರವರನ್ನು ಸಮಾಪನಾಧಿಕಾರಿಯಾಗಿ, ನೇಮಿಸಿ ಆದೇಶಿಸಲಾಗಿತ್ತು. ಸದರಿಯವರು ಸಂಘದ ಪ್ರಭಾರ ಪಡೆದು ಸಮಾಪನ ನಡವಳಿ ಕೈಗೊಂಡಿರುತ್ತಾರೆ ದಿನಾಂಕ:07-02-2012 ರಂದು ನಡೆದ ಇಲಾಖಾಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಆಡಳಿತಾತ್ಮಕ ಹಿತದೃಷ್ಠಿಯಿಂದಾ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಾಗರ ತಾ., ರವರಿಗೆ ಬದಲಾವಣೆ ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಾಗರ ತಾ., ರವರನ್ನು ಮರುನೇಮಕ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ನಂ,ಡಿಆರ್ಎಸ್/ಕಾನೂನು3/ಡಿಎಲ್ಎಸ್/100/1997-98/1737, ದಿನಾಂಕ 13-02-2012**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ನಂ:ಸಿಒ 139 ಸಿಎಲ್ಎಂ 2010 ದಿನಾಂಕ:17-02-2011 ರಲ್ಲಿ ದತ್ತವಾದ ಅಧಿಕಾರದನ್ವಯ, ಅಶೋಕ ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಶ್ರೀರಾಮಕೃಷ್ಣ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ.,ಆನಂದಪುರ. ಸಾಗರ ತಾ., ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಾಗರ ತಾ., ಇವರನ್ನು ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959. ಕಲಂ 74 ಮತ್ತು ನಿಯಮಗಳು 1960. ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಈ ದಿನ ದಿನಾಂಕ 13-02-2012 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಅಶೋಕ ವೆಂ.ಮೊರಬ,**
ಸಹಕಾರ ಸಂಘಗಳ ಉಪ ನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 209**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ವಿಷಯ:** ಸಮಾಪನೆಯಲ್ಲಿರುವ ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ,. ಸಾಗರ ಇದರ ಸಮಾಪನಾಧಿಕಾರಿ ಮರು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಚೇರಿಯ ಆದೇಶ ನಂ, ಡಿಆರ್‌ಎಸ್/ ಸಮಾಪನೆ/ಡಿಎಲ್‌ಎಸ್/ 120/2006–07. ದಿನಾಂಕ 23–03–2007.

2) ಈ ಕಚೇರಿಯ ಆದೇಶ ನಂ, ಡಿಆರ್‌ಎಸ್/ಡಿಐಎಸ್/ ಎಲ್‌ಕ್ಯೂಡಿ/ 252/2007–08. ದಿನಾಂಕ11–01–2008.

ಸಮಾಪನೆಯಲ್ಲಿರುವ ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ,. ಸಾಗರ ಈ ಸಹಕಾರ ಸಂಘವನ್ನು ಉಲ್ಲೇಖ(1)ರ ಈ ಕಚೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ,ಸಾಗರರವರನ್ನು ಸಮಾಪನಾಧಿಕಾರಿಯಾಗಿ, ನೇಮಿಸಿ ಆದೇಶಿಸಲಾಗಿತ್ತು ತದನಂತರ ಉಲ್ಲೇಖ(2) ರ ಆದೇಶದಲ್ಲಿ ಮೇಲ್ವಿಚಾರಕರು, ಕರ್ನಾಟಕ ರಾಜ್ಯ ವಸತಿ ಮಹಾಮಂಡಳ ನಿ.ಬೆಂಗಳೂರುರವರನ್ನು ಸಮಾಪನಾಧಿಕಾರಿಯಾಗಿ, ನೇಮಿಸಿ ಆದೇಶಿಸಲಾಗಿತ್ತು. ಸದರಿಯವರು ಸಂಘದ ಪ್ರಭಾರವನ್ನು ಪಡೆದಿರುವುದಿಲ್ಲಾ. ದಿನಾಂಕ:07–02–2012 ರಂದು ನಡೆದ ಇಲಾಖಾಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಆಡಳಿತಾತ್ಮಕ ಹಿತದೃಷ್ಠಿಯಿಂದಾ ಸಮಾಪನಾಧಿಕಾರಿಯಾಗಿ ಶ್ರೀ ಬಿ.ಧರ್ಮಪ್ಪ ದ್ವಿತೀಯ ದರ್ಜೆ ಸಹಾಯಕರು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಸಾಗರ ಇವರಿಗೆ ಬದಲಾವಣೆ ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ಬಿ.ಧರ್ಮಪ್ಪ ದ್ವಿತೀಯ ದರ್ಜೆ ಸಹಾಯಕರು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಸಾಗರ ರವರನ್ನು ಮರುನೇಮಕ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ನಂ,ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/120/2006–07/1735, ದಿನಾಂಕ 13–02–2012**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ನಂ:ಸಿಓ 139 ಸಿಎಲ್‌ಎಂ 2010 ದಿನಾಂಕ:17–02–2011 ರಲ್ಲಿ ದತ್ತವಾದ ಅಧಿಕಾರದನ್ವಯ, ಅಶೋಕ ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ,. ಸಾಗರ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ಬಿ.ಧರ್ಮಪ್ಪ ದ್ವಿತೀಯ ದರ್ಜೆ ಸಹಾಯಕ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ,ಸಾಗರ ಇವರನ್ನು ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು 1960 ರ ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಈ ದಿನ ದಿನಾಂಕ 13–02–2012 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಅಶೋಕ ವೆಂ.ಮೊರಬ,**
ಸಹಕಾರ ಸಂಘಗಳ ಉಪ ನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 210**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ವಿಷಯ:** ಸಮಾಪನೆಯಲ್ಲಿರುವ ವ್ಯವಸಾಯ ಸೇವಾ ಸಹಕಾರ ಸಂಘ, ನಿ.,ಕೆಂಗಟ್ಟೆ. ಶಿಕಾರಿಪುರ ತಾ., ಇದರ ಸಮಾಪನಾಧಿಕಾರಿ ಮರು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಚೇರಿಯಆದೇಶನಂ,ಡಿಆರ್‌ಎಸ್/ಎಲ್‌ಕ್ಯೂಡಿ/ಡಿಐಎಸ್/2254/2006–07 ದಿನಾಂಕ 28–02–2007

ಸಮಾಪನೆಯಲ್ಲಿರುವ ವ್ಯವಸಾಯ ಸೇವಾ ಸಹಕಾರ ಸಂಘ, ನಿ.,ಕೆಂಗಟ್ಟೆ. ಶಿಕಾರಿಪುರ ತಾ: ಈ ಸಹಕಾರ ಸಂಘವನ್ನು ಉಲ್ಲೇಖ(1)ರ ಈ ಕಚೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ, ಮೇಲ್ವಿಚಾರಕರು, ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ.,ಶಿವಮೊಗ್ಗ ಶಿಕಾರಿಪುರ ಶಾಖೆ 2ನೇ ವೃತ್ತ ರವರನ್ನು ಸಮಾಪನಾಧಿಕಾರಿಯಾಗಿ, ನೇಮಿಸಿ ಆದೇಶಿಸಲಾಗಿತ್ತು. ಸದರಿಯವರು ದಿನಾಂಕ 09–03–2007 ರಂದು ಸಂಘದ ಪ್ರಭಾರ ಪಡೆದು ಸಮಾಪನ ನಡವಳಿ ಕೈಗೊಂಡಿರುತ್ತಾರೆ ದಿನಾಂಕ:07–12–2011 ರಂದು ನಡೆದ ಸಮಾಪನಾಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಆಡಳಿತಾತ್ಮಕ ಹಿತದೃಷ್ಠಿಯಿಂದಾ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು ,ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಶಿಕಾರಿಪುರ ರವರಿಗೆ ಬದಲಾವಣೆ ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಶಿಕಾರಿಪುರ ರವರನ್ನು ಮರುನೇಮಕ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸಂ.ಡಿಅರ್‌ಎಸ್/ಎಲ್‌ಕ್ಯೂಡಿ/ಡಿಐಎಸ್/239/ 2254/2006–07/1709, ದಿನಾಂಕ:06–02–2012**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ನಂ:ಸಿಒ 139 ಸಿಎಲ್‌ಎಂ 2010 ದಿನಾಂಕ:17–02–2011 ರಲ್ಲಿ ದತ್ತವಾದ ಅಧಿಕಾರದನ್ವಯ, ಅಶೋಕ ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ವ್ಯವಸಾಯ ಸೇವಾ ಸಹಕಾರ ಸಂಘ ನಿ.,ಕೆಂಗಟ್ಟೆ. ಶಿಕಾರಿಪುರ ತಾಲ್ಲೂಕು ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಶಿಕಾರಿಪುರ ಇವರನ್ನು ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು 1960 ರ ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋಧನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಈ ದಿನ ದಿನಾಂಕ 06–02–2012 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಅಶೋಕ ವೆಂ.ಮೊರಬ,**
ಸಹಕಾರ ಸಂಘಗಳ ಉಪ ನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 196**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.**

**ವಿಷಯ:** ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ, ನಿ.,ಬಳೂರು, ಶಿಕಾರಿಪುರತಾ.,ಇದರ ಸಮಾಪನಾಧಿಕಾರಿ ಮರು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1) ಈ ಕಚೇರಿಯ ಆದೇಶ ನಂ,ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/250/2005–06 ದಿನಾಂಕ 25–11–2005
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪವಿಭಾಗ ಸಾಗರರವರ ಪತ್ರ ಸಂ:ಸನಿ24/ಸಮಾಪನೆ/ಸಿಆರ–11/2006–07 ದಿನಾಂಕ15–04–2006
3) ಈ ಕಚೇರಿಯಆದೇಶನಂ,ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/250/2005–06 ದಿನಾಂಕ 16–05–2006

ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ, ನಿ.,ಬಳೂರು, ಶಿಕಾರಿಪುರತಾ.ಈ ಸಹಕಾರ ಸಂಘವನ್ನು ಉಲ್ಲೇಖ(1)ರ ಈ ಕಚೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ ,ಸಹಕಾರ ಅಭಿವೃದ್ಧಿ ಅಧಿಕಾರಿ ಶಿಕಾರಿಪುರ ರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶಿಸಲಾಗಿತ್ತು. ಸದರಿಯವರು ದಿನಾಂಕ 25–09–2007ರಂದು ಸಂಘದ ಪ್ರಭಾರ ಪಡೆದು ಸಮಾಪನ ನಡವಳಿ ಕೈಗೊಂಡಿರುತ್ತಾರೆ ತದನಂತರ ಉಲ್ಲೇಖ(2) ರ ಆದೇಶದಲ್ಲಿ ಮಾರ್ಗವಿಸ್ತರಣಾಧಿಕಾರಿ, ಶಿಮೂಲ್ ನಿ.,ಶಿವಮೊಗ್ಗ, ಶಿಕಾರಿಪುರ ವೃತ್ತ ರವರನ್ನು ಸಮಾಪನಾಧಿಕಾರಿಯಾಗಿ ಮರುನೇಮಿಸಿ ಆದೇಶಿಸಲಾಗಿತ್ತು. ದಿನಾಂಕ:07–12–2011 ರಂದು ನಡೆದ ಸಮಾಪನಾಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಆಡಳಿತಾತ್ಮಕ ಹಿತದೃಷ್ಠಿಯಿಂದಾ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು ,ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಶಿಕಾರಿಪುರ ರವರಿಗೆ ಬದಲಾವಣೆ ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಶಿಕಾರಿಪುರ ರವರನ್ನು ಮರುನೇಮಕ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/250/2005–06/1708, ದಿನಾಂಕ:06–02–2012**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ನಂ:ಸಿಒ 139 ಸಿಎಲ್‌ಎಂ 2010 ದಿನಾಂಕ:17–02–2011 ರಲ್ಲಿ ದತ್ತವಾದ ಅಧಿಕಾರದನ್ವಯ, ಅಶೋಕ ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ, ನಿ., ಬಳೂರು,

ಶಿಕಾರಿಪುರ ತಾ. ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಶಿಕಾರಿಪುರ ಇವರನ್ನು ಮರುನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು ನಿಯಮಗಳು 1960 ರ ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋಧನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಈ ದಿನ ದಿನಾಂಕ 06–02–2012 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಅಶೋಕ ವೆಂ.ಮೊರಬ,**
ಸಹಕಾರ ಸಂಘಗಳ ಉಪ ನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 197**

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂ: ಕಾಇ 36 ಕಾಬಾಸೇ 2011, ಬೆಂಗಳೂರು, ದಿನಾಂಕ: 01–02–2012**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಈ ಕೆಳಗಿನ ವೃಂದದ ಅಧಿಕಾರಿಗಳ ದಿನಾಂಕ 01.01.2011ರಲ್ಲಿದ್ದಂತೆ ಕರಡು ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ನಾಗರಿಕ ಸೇವಾ (ಜೇಷ್ಠತೆ) ನಿಯಮಾವಳಿ, 1957ರ ನಿಯಮ 10(2)(ಎ) ಅಡಿಯಲ್ಲಿ ತಯಾರಿಸಿ ಜೇಷ್ಠತೆಯನ್ನು ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ನಿಗಧಿಗೊಳಿಸಲಾಗಿದೆ.

| ಕ್ರ.ಸಂ. | ವೃಂದ | ಅನುಬಂಧ |
|---|---|---|
| 1. | ಕಾರ್ಖಾನೆಗಳ ಜಂಟಿ ನಿರ್ದೇಶಕರು | 1 |
| 2. | ಬಾಯ್ಲರುಗಳ ಜಂಟಿ ನಿರ್ದೇಶಕರು | 2 |
| 3. | ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) | 3 |
| 4. | ಕಾರ್ಖಾನೆಗಳ ಉಪ ನಿರ್ದೇಶಕರು | 4 |
| 5. | ಬಾಯ್ಲರುಗಳ ಉಪ ನಿರ್ದೇಶಕರು | 5 |
| 6. | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು | 6 |
| 7. | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು | 7 |
| 8. | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | 8 |
| 9. | ಬಾಯ್ಲರುಗಳ ಸಹಾಯಕ ನಿರ್ದೇಶಕರು | 9 |
| 10. | ಆಡಳಿತಾಧಿಕಾರಿ | 10 |
| 11. | ಪತ್ರಾಂಕಿತ ವ್ಯವಸ್ಥಾಪಕರು | 11 |

ಈ ಸಂಬಂಧ ಆಕ್ಷೇಪಣೆಗಳು ಇದ್ದಲ್ಲಿ, ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರಿಗೆ ಸಲ್ಲಿಸುವಂತೆ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

**ಅನುಬಂಧ -1**

**ಕಾರ್ಖಾನೆಗಳ ಜಂಟಿ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01-01-2011 ರಲ್ಲಿದ್ದಂತೆ**

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಜಂಟಿ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬಿ.ಎಸ್. ರಾಮಚಂದ್ರ | ಮುಂಬಡ್ತಿ | 15-03-1955 | 24-07-1978 | 26-04-2002 | 26-04-2002 | |
| 2 | ಎ.ಆರ್. ವಿಜಯೇಂದ್ರ | ಮುಂಬಡ್ತಿ | 26-10-1958 | 01-04-1982 | 19-09-2006 | 18-09-2006 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

**ಅನುಬಂಧ -2**

**ಬಾಯ್ಲರುಗಳ ಜಂಟಿ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01-01-2011 ರಲ್ಲಿದ್ದಂತೆ**

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಜಂಟಿ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಟಿ.ಜಿ. ಮಂಜುನಾಥ ( ಎಸ್.ಸಿ.) | ಮುಂಬಡ್ತಿ | 24-09-1958 | 18-02-1982 | 09-07-2004 | 09-07-2004 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

**ಅನುಬಂಧ -3**

**ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01-01-2011 ರಲ್ಲಿದ್ದಂತೆ**

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ /ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಜಂಟಿ ನಿರ್ದೇಶಕರ (ವೈದ್ಯಕೀಯ) ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಡಾ:ವಿ.ಎಚ್.ಎಚ್. ಸುರೇಂದ್ರ | ಮುಂಬಡ್ತಿ | 09-03-1958 | 31-04-1984 | 19-09-2006 | 19-09-2006 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ – 4

### ಕಾರ್ಖಾನೆಗಳ ಉಪ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2011 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಉಪ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಂ.ಎನ್. ಜಕ್ಕಣ್ಣವರ್ | ಮುಂಬಡ್ತಿ | 05–08–1956 | 12–04–1982 | 14–10–1999 | 14–10–1999 | |
| 2 | ಎ. ಸೋಮಶೇಖರ | ಮುಂಬಡ್ತಿ | 22–05–1955 | 02–01–1984 | 20–04–2001 | 20–04–2001 | |
| 3 | ಜಿ.ಪಿ. ರಾಜಗೋಪಾಲ | ಮುಂಬಡ್ತಿ | 31–01–1959 | 05–01–1984 | 16–07–2001 | 16–07–2001 | |
| 4 | ಬಿ.ವಿ. ರವಿಕುಮಾರ್ | ಮುಂಬಡ್ತಿ | 04–04–1959 | 20–06–1986 | 10–10–2002 | 10–10–2002 | |
| 5 | ಡಿ.ಸಿ. ಜಗದೀಶ್ | ಮುಂಬಡ್ತಿ | 10–10–1959 | 25–06–1983 | 16–10–2002 | 16–10–2002 | |
| 6 | ಎಸ್.ಆರ್. ಶ್ರೀಧರ್ | ಮುಂಬಡ್ತಿ | 06–09–1957 | 17–06–1983 | 24–02–2005 | 24–02–2005 | |
| 7 | ಕೆ. ಶ್ರೀನಿವಾಸ್ ( ಎಸ್.ಸಿ.) | ಮುಂಬಡ್ತಿ | 14–02–1966 | 28–09–1988 | 02–03–2005 | 02–03–2005 | |
| 8 | ಟಿ.ಆರ್.ರಮೇಶ್ | ಮುಂಬಡ್ತಿ | 30–07–1960 | 26–09–1988 | 21–07–2007 | 21–07–2007 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ – 5

### ಬಾಯ್ಲರುಗಳ ಉಪ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2011 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆ ಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಉಪ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಸ್.ಬಿ. ಬಿರಾದಾರ | ಮುಂಬಡ್ತಿ | 08–11–1954 | 08–03–1984 | 04–02–2003 | 04–02–2003 | |
| 2 | ಎಸ್.ಎಂ. ವಾಸಣ್ಣ | ಮುಂಬಡ್ತಿ | 05–03–1958 | 08–03–1984 | 10–11–2004 | 10–11–2004 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ – 6

### ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2011 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಕೆ.ಜಿ. ನಂಜಪ್ಪ | ಮುಂಬಡ್ತಿ | 25–04–1972 | 03–08–1995 | 19–10–2002 | 19–10–2002 | |
| 2. | ಟಿ.ವಿ. ನಾರಾಯಣಪ್ಪ (ಎಸ್.ಸಿ) | ಮುಂಬಡ್ತಿ | 10–03–1967 | 09–08–1995 | 19–10–2002 | 19–10–2002 | |

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 3. | ಎ.ಜೆ. ಸತೀಶಬಾಬು | ಮುಂಬಡ್ತಿ | 12–01–1963 | 03–08–1995 | 19–10–2002 | 19–10–2002 | |
| 4. | ರವೀಂದ್ರನಾಥ ಎನ್ ರಾಠೋಡ್ (ಎಸ್.ಸಿ.) | ಮುಂಬಡ್ತಿ | 22–05–1969 | 29–12–1995 | 19–10–2002 | 19–10–2002 | |
| 5. | ಎಚ್.ಎಸ್. ನರೇಂದ್ರಬಾಬು | ಮುಂಬಡ್ತಿ | 23–08–1966 | 01–04–1991 | 08–11–2002 | 08–11–2002 | |
| 6. | ಆರ್.ಕೆ. ಪಾರ್ಥಸಾರಥಿ | ಮುಂಬಡ್ತಿ | 23–12–1967 | 29–10–1997 | 24–02–2005 | 24–02–2005 | |
| 7. | ಎನ್. ನವನೀತಮೋಹನ್ | ಮುಂಬಡ್ತಿ | 11–03–1971 | 12–11–1997 | 26–02–2005 | 26–02–2005 | |
| 8. | ಎಂ.ಎಸ್. ಮಹದೇವ್ | ಮುಂಬಡ್ತಿ | 20–07–1967 | 12–11–1997 | 08–06–2005 | 08–06–2005 | |
| 9. | ವಿ.ತಿಮ್ಮರಾಜು | ಮುಂಬಡ್ತಿ | 18–05–1970 | 20–10–1997 | 03–08–2007 | 03–08–2007 | |

* ಮೇಲ್ಕಂಡ ವೃಂದದ ಜೇಷ್ಠತೆಯು ಶ್ರೀಯುತರುಗಳಾದ ಶ್ರೀ.ರವೀಂದ್ರನಾಥ್.ಎನ್.ರಾಠೋಡ್, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು ಮತ್ತು ಶ್ರೀ.ಎಚ್.ಎಸ್. ನರೇಂದ್ರಬಾಬು, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ರವರುಗಳು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 18191/2009 ರ ಅಂತಿಮ ತೀರ್ಪಿಗೆ ಒಳಪಡುತ್ತದೆ.

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ – 7

## ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2011 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಕೆ.ವಿ.ಚಂದ್ರಮೌಳಿ | ಮುಂಬಡ್ತಿ | 20–05–1956 | 07–03–1984 | 02–05–1996 | 02–05–1996 | |
| 2 | ಅಶೋಕ. ಆರ್.ಗಾಂವ್‌ಕರ | ಮುಂಬಡ್ತಿ | 14–02–1956 | 10–08–1989 | 26–08–1999 | 26–08–1999 | |
| 3 | ಕೆ.ವಿ.ಪಾಲಯ್ಯ (ಎಸ್.ಟಿ) | ಮುಂಬಡ್ತಿ | 19–09–1962 | 21–04–1995 | 04–02–2003 | 04–02–2003 | |
| 4 | ಕೆ.ಎಂ.ಪ್ರಥಮ್ | ಮುಂಬಡ್ತಿ | 20–05–1969 | 19–12–1991 | 23–12–2004 | 23–12–2004 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ – 8

### ಕಾರ್ಖಾನೆಗಳ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2011 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆ ಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಸ್.ಎ. ನರಸಿಂಹಮೂರ್ತಿ | ನೇರ ನೇಮಕಾತಿ | 20–07–1967 | 13–11–1997 | 13–11–1997 | 13–11–1997 | |
| 2 | ರಾಜೇಶ ಸಿ ಮಿಶ್ರಿಕೋಟಿ (ಎಸ್.ಸಿ) | ನೇರ ನೇಮಕಾತಿ | 17–11–1969 | 20–10–1997 | 20–10–1997 | 20–10–1997 | |
| 3 | ಕೆ.ಎಸ್. ಕೃಷ್ಣಪ್ಪ (ಎಸ್.ಟಿ) | ನೇರ ನೇಮಕಾತಿ | 01–06–1971 | 12–11–1997 | 12–11–1997 | 12–11–1997 | |
| 4 | ಎಂ.ಎ. ಸೋಮಶೇಖರ | ನೇರ ನೇಮಕಾತಿ | 15–07–1973 | 11–03–1998 | 11–03–1998 | 11–03–1998 | |
| 5 | ವೆಂಕಟೇಶ ರಾಠೋಡ್ ( ಎಸ್.ಸಿ ) | ನೇರ ನೇಮಕಾತಿ | 24–03–1974 | 16–03–1998 | 16–03–1998 | 16–03–1998 | |
| 6 | ಭಾರತಿ ಮಗದುಮ ಅಣ್ಣಪ್ಪ | ನೇರ ನೇಮಕಾತಿ | 27–08–1966 | 23–03–1998 | 23–03–1998 | 23–03–1998 | |
| 7 | ಕೆ.ಎನ್. ಸಫೀರ್ ಅಹ್ಮದ್ | ನೇರ ನೇಮಕಾತಿ | 09–08–1963 | 05–03–1998 | 05–03–1998 | 05–03–1998 | |
| 8 | ಎಚ್. ಸುರೇಶ | ನೇರ ನೇಮಕಾತಿ | 20–06–1970 | 29–04–1999 | 29–04–1999 | 29–04–1999 | |
| 9 | ಎ.ಪ್ರಕಾಶ್ ಶೆಣೈ | ನೇರ ನೇಮಕಾತಿ | 21–05–1977 | 03–07–2009 | 03–07–2009 | 03–07–2009 | ಪ್ರೊಬೇಷನರಿ ಅವಧಿ ಮೇಲಿದ್ದಾರೆ |
| 10 | ಎ.ಶ್ರೀನಿವಾಸ್ | ನೇರ ನೇಮಕಾತಿ | 14–05–1981 | 02–07–2009 | 02–07–2009 | 02–07–2009 | |
| 11 | ಎಂ.ಕೆ.ಉಮೇಶ್ | ನೇರ ನೇಮಕಾತಿ | 10–07–1985 | 02–07–2009 | 02–07–2009 | 02–07–2009 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ – 9

### ಬಾಯ್ಲರುಗಳ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2011 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ/ ಇತರೆ ಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಂ.ಎಚ್. ಚಿಕ್ಕಮುನಿಯಪ್ಪ (ಎಸ್.ಸಿ ) | ನೇರ ನೇಮಕಾತಿ | 18–04–1964 | 16–10–2003 | 16–10–2003 | 16–10–2003 | |
| 2 | ಎಸ್.ಆರ್.ಶ್ರೀನಿವಾಸ್ | ನೇರ ನೇಮಕಾತಿ | 04–01–1985 | 02–07–2009 | 02–07–2009 | 02–07–2009 | ಪ್ರೊಬೇಷನರಿ ಅವಧಿ ಮೇಲಿದ್ದಾರೆ |
| 3 | ಟಿ.ರವಿ (ಎಸ್.ಸಿ.) | ನೇರ ನೇಮಕಾತಿ | 04–06–1984 | 03–07–2009 | 03–07–2009 | 03–07–2009 | |
| 4 | ಬಿ.ಕೆ.ಶ್ವೇತಾ | ನೇರ ನೇಮಕಾತಿ | 22–10–1985 | 09–07–2009 | 09–07–2009 | 09–07–2009 | |

**ಬಿ. ಶಿವರಾಮ ಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

